श्रीमदानन्दतीर्थभगवत्पादाचार्यविरचितं

# ईशावास्योपनिषद्भाष्यम्

त्रयोदशव्याख्याविभूषितम्




सम्पादकः - पं. वादिराजाचार्य करणम्

प्रकाशनम् - विश्वमध्वमहापरिषत्, उत्तरादिमठः

V.M.M.P. Publication No. 37

श्रीमदानन्दतीर्थभगवत्पादाचार्यविरचितम्

# ।। ईशावास्योपनिषद्भाष्यम् ।।

(त्रयोदशव्याख्यानविभूषितम्)

सम्पादकः

पं. वादिराजाचार्य करणम्

*प्रकाशनम्*

विश्वमध्वमहापरिषत्

उत्तरादिमठः, श्रीजयतीर्थविद्यापीठम्,

# ISHAVASYOPANISHAD BHASHYAM

A work of **Sri Madhwacharya**

with thirteen commentaries written by Sri Jayateertharu, Sri Vamanapanditacharya, Sri Vadiraja Teertha, Sri Srinivasa Teertha, Sri Chalari Narsimhacharya, Sri Satyaprajna Teertha, Sri Narasimhacharya, Sri Srinivasacharya, Sri Kanchi Raghunathacharya, Sri Raghavendra Teertha, Sri Nrusimha Bikshu, Sri Anantha Bhatta, Sri Krisnavadhoota.

Critically Edited By : **Pt. Vadirajacharya Karanam.**

Published by : **Vishva Madhwa Mahaparishat** Bangalore.

ISBN : 81-903336-4-X

Copies : 1000

First Edition : November 2006

No.of Pages : XL +236



**Price. 75/-**

Copies can be had from :

**2. Vishva Madhwa Mahaparishat**
#11, 2nd Floor, Uttaradimath Building.
Uttaradi Math Road, Shankarpuram,
Basavanagudi BANGALORE - 4
Phone : 080 26603692

Type Setting : V.M.M.P Research wing.

Printed by :

**VAGARTHA,** 149, 8th Cross, N.R.Colony, Bangalore -4 Ph.22427677.

॥ श्रीदिग्विजयरामो विजयते ॥

## श्रीमदुत्तरादिमठाधीशानां श्री १००८ श्री सत्यात्मतीर्थानां

# अनुग्रहसन्देशः

महदिदं प्रमोदास्पदं यदनेकटिप्पणीसमेतटीकासमलङ्कृतं ईशावास्यभाष्यं कवेर्मनीषीणः, परिभुवः, स्वयम्भुवः, शाश्वतीभ्यः समाभ्यः याथातथ्यतोऽर्थान् विदधतः ईशस्यैव यज्ञस्य कृपया श्रीमदुत्तरादिमठेन, विश्वमध्वमहापरिषदा च प्राकाश्यमानीयत इति ।

न टीकाटिप्पणीसहायमन्तरा भाष्यभावः स्वधिगमः ।

यस्माद्ब्रह्मेन्द्ररुद्रादिदेवतानां श्रियोऽपि च ।
ज्ञानस्फूर्तिस्सदा तस्मै हरये गुरवे नमः ॥

अत्र ब्रह्मादिवत् श्रियोऽपि ज्ञानस्फूर्तिरभिनवोत्पद्यत इति भाति । परन्तु न तच्छास्त्रसम्मतिपथमधिरोहति ।

तत्रैवं श्रीमट्टीकाकाराः अनुगृह्णन्ति । 'ब्रह्मादीनामप्राप्तज्ञानमुत्पद्यते । श्रियस्तु सर्वदा विद्यत इति सूचयितुं श्रियोऽपीति पृथग्ग्रहणम्' इति । 'ज्ञानस्फूर्तिः ज्ञातव्यार्थप्रतिभा । यथायोग्यं क्रियाध्याहारः' इति ।

श्रीवादिराजतीर्थाः 'ब्रह्मादिषु भवेदिति क्रियाध्याहारः । लक्ष्म्यां तु स्पष्टीभवेदिति क्रियाध्याहारः' इत्यामनन्ति ।

श्रीनिवासतीर्थाः विरिञ्चस्य, रमायाश्च ज्ञानविषये एवं वदन्ति । 'सर्ववेदोक्तगुणानां ब्रह्मणा युगपदेव साक्षात्क्रियमाणत्वादप्राप्तभगवज्ज्ञानं कथमितिचेदत्र सम्प्रदायविद आहुः । ब्रह्मणा परब्रह्मसाक्षात्कार हेतुभूतोपासनाविषयाः सर्वेऽपि वेदोक्ता गुणा सर्वदा साक्षात्क्रियन्त एव । अप्राप्तज्ञानं तु यदा भगवान् ब्रह्माणं प्रति स्वानुभवैकवेद्यान् वेदानुक्तान् स्वगुणान् व्याख्याति तदा तद्विषयं परोक्षज्ञानमुत्पद्यत एव ।

ननु लक्ष्मीज्ञाने 'नवनवसुविशेषोपलम्भात्'....इत्युक्त्या तत्र एतन्न्याय सञ्चारायोगात् तस्याः परोक्षज्ञानाभावेन स्वेन ज्ञेयाशेषविशेषाणां नित्यापरोक्षीकरणादिति चेत् सत्यम् । स्वज्ञेयाशेषविशेषज्ञानमपरोक्षरूपं शक्त्यात्मना अस्त्येव । नेत्याद्युक्तिस्तु व्यक्तिमपेक्ष्येति ध्येयम् । यद्यपि व्यक्तिरपि शक्त्यभिन्नत्वात्सर्वदा अस्त्येव । विशेषबलात्समाधेयमित्यादि वदन्ति' इति ॥

एवमन्येऽपि टिप्पणीकारा विशदयन्ति ।

यदि मङ्गलपद्ये एव ईदृशी टीकाटिप्पणीनामावश्यकता तदा किं वक्तव्यं समस्तस्य भाष्यस्य बोधाय तासामनिवार्यता इति ।

अस्य ग्रन्थस्य सम्पादनं मुद्रिता अमुद्रिताश्च टीप्पणीः संशोध्य महता परिश्रमेण व्यधायि अस्मच्छिष्येण पण्डितेन वादिराजाचार्येण करणोपाह्वयेन । एतद्ग्रन्थप्रकाशनाय पं पुराणिकजयतीर्थाचार्येण पं महिदासाचार्येण पं माधवाचार्येण च सहायो व्यधायि । ग्रन्थस्यास्य संशोधनाय पं व्यासनकेरे प्रभञ्जनाचार्यैः कानिचन हस्तलिखितपुस्तकानि प्रदत्तानि । सर्वानेतानेवमन्यांश्चैतद्ग्रन्थमुद्रणसहायकान् अस्मदुपास्यमूर्तिः श्रीमूलरामदिग्विजयरामवेदव्यासाभिन्नो भगवान् ज्ञानादिदानेन समनुगृह्णन्तु इति प्रार्थयामहे ।

इति नारायणस्मरणानि

श्रीसत्यात्मतीर्थश्रीपादाः उत्तरादिमठः



## ಆಶೀರ್ವಚನ

ಶ್ರೀಯುತ ಎಮ್.ಬಿ ರಾಘವೇಂದ್ರಮೂರ್ತಿ ಶ್ರೀಮತಿ ಪ್ರಭಾವತಿ ಮುಂಬಯಿ ಇವರು ತಮ್ಮ ಅರವತ್ತನೆಯ ವರ್ಷದ ಜನ್ಮದಿನದ ಸವಿನೆನಪಿಗಾಗಿ ಈ ಗ್ರಂಥದ ಪ್ರಕಾಶನದ ಸಂಪೂರ್ಣ ವೆಚ್ಚವನ್ನು ಭರಿಸಿ ಶ್ರೀವೇದವ್ಯಾಸದೇವರ ಹಾಗೂ ಶ್ರೀಮದಾಚಾರ್ಯರ ಉತ್ತಮ ಸೇವೆಯನ್ನು ಮಾಡಿದ್ದಾರೆ. ಈ ದಂಪತಿಗಳಿಗೆ ಭಗವಂತ ಆಯುರಾರೋಗ್ಯ ಐಶ್ವರ್ಯಗಳನ್ನು ಆಚಾರ್ಯರ ಶಾಸ್ತ್ರದಲ್ಲಿ ಆಸಕ್ತಿಯನ್ನು ನೀಡಲಿ ಎಂದು ಅಸ್ಮದುಪಾಸ್ಯಮೂರ್ತಿ ಶ್ರೀಮೂಲರಾಮದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಉತ್ತರಾದಿಮಠ



# ಪ್ರಕಾಶಕರ ಮಾತು

ಶ್ರೀ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥರು ಹುಟ್ಟು ಹಾಕಿದ ಸಂಸ್ಥೆ ವಿಶ್ವಮಧ್ವಮಹಾ ಪರಿಷತ್. ವಿಶ್ವದಲ್ಲೆಲ್ಲ ಮಧ್ವರ ಮತವನ್ನು ಪ್ರಚಾರಮಾಡಬೇಕೆಂಬ ಹೆಗ್ಗುರಿಯಿಂದ ರೂಪುಗೊಂಡ ಸಂಸ್ಥೆ ಇದು. ಕಾಲಕ್ಕೆ ತಕ್ಕಂತೆ ಹೊಸ ಉತ್ಸಾಹದಿಂದ ಈ ಸಂಸ್ಥೆಯ ಚಟುವಟಿಕೆಗಳು ಮೆರಗುಗೊಳ್ಳುತ್ತಲೇ ಇವೆ.

ನಮ್ಮ ಸಂಸ್ಥೆಯು ಪ್ರಾಚೀನವಾದ ಅಪ್ರಕಟಿತವಾದ ಸಮಗ್ರ ಮಾಧ್ವಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಈಗಾಗಲೇ ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ, ಸಾಮಾನ್ಯಜನರಿಗೆ ಉಪಯುಕ್ತವಾದ ಸಂಸ್ಕೃತ, ಕನ್ನಡ, ತೆಲುಗು, ಹಿಂದಿ, ಮರಾಠಿ, ತಮಿಳು ಹಾಗು ಆಂಗ್ಲಭಾಷೆಗಳಲ್ಲಿ ಅನೇಕಗ್ರಂಥಗಳು ಈ ಸಂಸ್ಥೆಯಿಂದ ಪ್ರಕಾಶಿತವಾಗಿವೆ. ಇನ್ನೂ ಅನೇಕ ಗ್ರಂಥಗಳ ಪ್ರಕಾಶನದ ಕಾರ್ಯ ಭರದಿಂದ ಸಾಗಿದೆ.

ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥರ ಅನುಗ್ರಹದ ಬೆಂಬಲ ಹಾಗೂ ಪರಮಪೂಜ್ಯ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ ಆಶೀರ್ವಾದ ಹಾಗೂ ಮಾರ್ಗದರ್ಶನಗಳು ಈ ಎಲ್ಲ ಕಾರ್ಯಗಳ ಯಶಸ್ಸಿಗೆ ಕಾರಣವಾಗಿವೆ.

ಪ್ರಕೃತ ಈಶಾವಾಸ್ಯೋಪನಿಷದ್ಭಾಷ್ಯ ಹದಿಮೂರು ವ್ಯಾಖ್ಯಾನಗಳಿಂದ ಪ್ರಕಾಶಿತವಾಗು-ತ್ತಿರುವದು ಪರಿಷತ್ತಿಗೆ ಹೆಮ್ಮೆಯ ವಿಷಯ.

ಇದನ್ನು ಸಂಪಾದನೆ ಮಾಡಿದ ಪಂ. ವಾದಿರಾಜಾಚಾರ್ಯ ಕರಣಂ ಇವರಿಗೆ, ಗ್ರಂಥಪ್ರಕಾಶನಕ್ಕಾಗಿ ತಮ್ಮ ಸಂಗ್ರಹದಲ್ಲಿಯ ಹಸ್ತಪ್ರತಿಗಳನ್ನು ನೀಡಿದ ಪಂ. ವ್ಯಾಸನಕೆರೆ ಪ್ರಭಂಜನಾಚಾರ್ಯರಿಗೆ,

ಮುದ್ರಣಕ್ಕಾಗಿ ಸಂಪೂರ್ಣವಾಗಿ ಧನಸಹಾಯ ಮಾಡಿದ ಮುಂಬಯಿಯ ಎಮ್.ಬಿ. ರಾಘವೇಂದ್ರಮೂರ್ತಿ, ಪ್ರಭಾವತಿ ದಂಪತಿಗಳಿಗೆ

ಹಾಗೂ ಸುಂದರವಾಗಿ ಮುದ್ರಣಮಾಡಿದ ವಾಗರ್ಥಮುದ್ರಣಾಲಯದವರಿಗೆ,ಅಲ್ಲದೆ ಈ ಗ್ರಂಥದ ಪ್ರಕಾಶನಕ್ಕಾಗಿ ಸಹಾಯಮಾಡಿದ ಎಲ್ಲರಿಗೂ ಪರಿಷತ್ತು ಆಭಾರಿಯಾಗಿದೆ.

ಪ್ರಧಾನ ಕಾರ್ಯದರ್ಶಿಗಳು
ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ
ಬಸವನಗುಡಿ ಬೆಂಗಳೂರು - 4

# ಮೊದಲ ಮಾತು

ನಿತ್ಯಾನಿತ್ಯಜಗದ್ಧಾತ್ರೇ ನಿತ್ಯಾಯ ಜ್ಞಾನಮೂರ್ತಯೇ ।
ಪೂರ್ಣಾನಂದಾಯ ಹರಯೇ ಸರ್ವಯಜ್ಞಭುಜೇ ನಮಃ ॥

ಯಸ್ಮಾದ್ಬ್ರಹ್ಮೇಂದ್ರರುದ್ರಾದಿದೇವತಾನಾಂ ಶ್ರಿಯೋಽಪಿ ಚ ।
ಜ್ಞಾನಸ್ಫೂರ್ತಿಸ್ಸದಾ ತಸ್ಮೈ ಹರಯೇ ಗುರವೇ ನಮಃ ॥

ಸಂಸಾರ ಇದು ಗರತುಂಬಿದ ಸಾಗರ. ವಿಷ ತುಂಬಿದ ಕಡಲು. ಕ್ಷುದ್ರಸಮುದ್ರವಿದು. ಇಲ್ಲಿ ಸಿಗುವ ವಿಷಯಗಳೆಲ್ಲವೂ ವಿಷಪ್ರಾಯ. ಭಗವಂತನ ಪ್ರಾಪ್ತಿ ಇಲ್ಲಿ ಆಗದು. ಆದರೆ ಹರಿಯನ್ನು ಪಡೆಯಲು ಇಲ್ಲಿಯೆ ಹವಣಿಸಬೇಕು. ಅದಕ್ಕಾಗಿ ತಾಳ್ಮೆ ಬೇಕು. ತಾಳುವಿಕೆಗಿಂತನ್ಯ ತಪವು ಇಲ್ಲ. ಆದರೆ ವಿಷಯಗಳ ಭವ್ಯತೆಯನ್ನು ಕಂಡು ನಾವೆಲ್ಲ ಬೆರಗಾಗಿದ್ದೇವೆ. ನಿಬ್ಬೆರಗಾಗಿದ್ದೇವೆ. ತಾಳ್ಮೆಗೆಟ್ಟಿದ್ದೇವೆ. ವಿಷಯಗಳ ಸೇವನೆಯಲ್ಲಿ ಮುಳುಗಿದ್ದೇವೆ. ತೇಲಿದ್ದೇವೆ. ಮೊದಲು ತೋರಿದ ಮಧುರವಿಷಯಸುಖಕ್ಕೆ ಮರುಳಾಗಿದ್ದೇವೆ. ಅರಳುಮರುಳಾಗಿದ್ದೇವೆ. ನಿರಂತರ ಮೇರೆ ಮೀರಿ ಬರುತ್ತಿರುವ ಅನರ್ಥಗಳ ಅಲೆಗಳಲ್ಲಿ ಸಿಲುಕಿಕೊಂಡಿದ್ದೇವೆ. ಅವುಗಳ ಸೆಳೆತದಿಂದ ತೊಳಲಾಡುತ್ತಿದ್ದೇವೆ. ಮಾಡಿದ್ದುಣ್ಣೋ ಮಹರಾಯ ಎಂದು ಮರಗುತ್ತಿದ್ದೇವೆ. ಮಮ್ಮಲ ಮರಗುತ್ತಿದ್ದೇವೆ. ಈ ತರಹತರಹದ ತೊಳಲಾಟಗಳನ್ನು ತೊಲಗಿಸಿಕೊಳ್ಳುವದು ಅತ್ಯಂತ ಅಸಾಧ್ಯ.

ತರಣಿಗೆ ಎದುರಾಗಿ ತಮವು ಹೋಗಬಹುದೇನೋ ಆದರೆ ಹರಿಯ ಕರುಣೆಗೆ ಎದುರಾಗಿ ಹೋಗುವ ಧೈರ್ಯ ಈ ಚರಾಚರ ಪ್ರಪಂಚದಲ್ಲಿ ಯಾವುದಕ್ಕೂ ಇಲ್ಲ. ನಿತ್ಯಸತ್ಯವಿದು.

ಪರಮಾತ್ಮನ ಕರುಣೆ ಕಂಡವರಿಗೆಲ್ಲ ಆಗುವದಿಲ್ಲ. ಹರಿಯನ್ನು ಕಂಡವರಿಗೆ ಮಾತ್ರ ಅವನ ಪ್ರಸಾದದ ಪ್ರಾಪ್ತಿಯಾಗುತ್ತದೆ. ಹರಿಯನ್ನು ಕಾಣುವದೆಂದರೆ ಹೊರಗಣ್ಣಿನಿಂದ ರಾಮಕೃಷ್ಣಾದಿರೂಪಗಳನ್ನು, ಜಡವಾದ ಪ್ರತಿಮೆಗಳನ್ನು ನೋಡುವದು ಮಾತ್ರವಲ್ಲ. ಅಂತರಂಗದಲ್ಲಿ ರಂಗನ ಮಂಗಳ ರೂಪದ ಸಂದರ್ಶನವಾಗಬೇಕು. ಇದುವೆ ಅಪರೋಕ್ಷಜ್ಞಾನ. ಈ ಅಪರೋಕ್ಷಕ್ಕೆ ಅನಿವಾರ್ಯವಾದದ್ದು ಪರೋಕ್ಷಜ್ಞಾನ. ಈ ಪರೋಕ್ಷಜ್ಞಾನವನ್ನು ಪಡೆಯಲು ವೇದವೇದಾಂತಗಳಿಗೆ ಮೊರೆ ಹೋಗಬೇಕು. ಎಲ್ಲ ತತ್ತ್ವಗಳ ತಿರುಳು ವೇದವೇದಾಂತಗಳಲ್ಲಿ ಅಂತರ್ಲೀನವಾಗಿದೆ. ಈ ಉಪನಿಷತ್ತುಗಳನ್ನು ನಿಷ್ಠೆಯಿಂದ, ಶುದ್ಧಾಂತಃಕರಣರಾಗಿ ಅಧ್ಯಯನ ಮಾಡಿದವರಿಗೆ ಮಾತ್ರ ತತ್ತ್ವಜ್ಞಾನದ ಪ್ರಾಪ್ತಿಯಾಗುತ್ತದೆ.

ಉಪನಿಷತ್ತುಗಳನ್ನು ವೇದಾಂತ ಎಂತಲೂ ವ್ಯವಹರಿಸುತ್ತಾರೆ. ಅಂತ ಎಂದರೆ ಕೊನೆ. ಕೊನೆಯಲ್ಲಿದ್ದದ್ದು. ನಿರ್ಣಯ ಇದು ಯಾವಾಗಲೂ ಕೊನೆಯಲ್ಲಿರುತ್ತದೆ. ಆದ್ದರಿಂದ ಅಂತ

ಎಂದರೆ ನಿರ್ಣಯ. ಸಮಸ್ತವೇದಾರ್ಥದ ಇತ್ಯರ್ಥವನ್ನು ಇದು ಮಾಡುತ್ತದೆ. ಹೀಗಾಗಿ ಇದು ವೇದಾಂತ.

ವೈದಿಕಕರ್ಮಕಾಂಡಕ್ಕೆ ವ್ಯತಿರೇಕವಾಗಿ ಒಂದು ವಿನೂತನವಾದ ಸಿದ್ಧಾಂತವನ್ನು ಸ್ಥಾಪಿಸಿದ ಘನತೆ ಉಪನಿಷತ್ತುಗಳಿಗಿದೆ ಎಂದು ಅನೇಕ ವಿಮರ್ಶಕರ ನಿಲುವು. ಅಬೋಧಪ್ರೇರಿತವಾದ ಇಂತಹ ನಿಲುವುಗಳಿಗೆ ಲೆಕ್ಕವಿಲ್ಲ.

ವೈದಿಕವಾದ ಕರ್ಮಕಾಂಡಕ್ಕೆ ಪೋಷಕವಾಗಿದೆ ಔಪನಿಷದವಾದ ಜ್ಞಾನಕಾಂಡ. ಇದು ಮುಮ್ಮಾತ್ತಿಗೂ ವಾಸ್ತವ. ಸಂಗ್ರಹವಾಗಿ ಇದನ್ನು ಹೀಗೆ ತಿಳಿಯಬಹುದು.

ಕೇವಲ ಕರ್ಮ ನೀರಸ. ಯಾವ ಪ್ರಯೋಜನವೂ ಅದರಿಂದಾಗದು. ಜೊತೆಗೆ ಹರಿಯ ಅರಿವು ಸೇರಿದಾಗ ಮಾತ್ರ ಅದು ರಸಪ್ರಾಪ್ತಿಗೆ ಸಾಧನವಾಗುತ್ತದೆ. 'ರಸೋ ವೈ ಸಃ' 'ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ' ಸ್ವಯಂ ಪರಬ್ರಹ್ಮನೇ ರಸ. ಅಂತಹಾ ರಸದ ಪ್ರಾಪ್ತಿಯಿಂದ ಮನುಷ್ಯ ಆನಂದರಸಕಾರಂಜಿಯಾಗುತ್ತಾನೆ.

ಈ ಪರಬ್ರಹ್ಮನ ಅರಿವು ಉಪನಿಷತ್ತುಗಳಿಂದ ಝಟಿತಿ ಆಗುತ್ತದೆ. ಹೀಗೆ ಉಪನಿಷತ್ತಿನ ಸಹಕಾರವಿದ್ದಾಗ ಕರ್ಮಕಾಂಡ ರಸಪ್ರಾಪ್ತಿಗೆ ಸಾಧನವಾಗುತ್ತದೆ. ಆದ್ದರಿಂದ ಕರ್ಮಕಾಂಡವಿದು ಉಪನಿಷತ್ಕಾಂಡದ ಅವಿಭಾಜ್ಯ ಅಂಗವಾಗಿದೆ. ಹೀಗೆ ವೈದಿಕಕರ್ಮಕಾಂಡಕ್ಕೆ ಪೋಷಕವಾಗಿದೆ ಉಪನಿಷತ್ಕಾಂಡ. ಇದು ಆಚಾರ್ಯರ ತೀರ್ಮಾನ.

ಒಂದರ್ಥದಲ್ಲಿ ಕರ್ಮಕಾಂಡದ ಪ್ರಧಾನ ಪ್ರತಿಪಾದ್ಯನೂ ಪರಮಾತ್ಮನೇ ಎಂಬುದು ನಿಶ್ಚಪ್ರಚ. 'ಸರ್ವೇ ವೇದಾ ಯತ್ಪದಮಾಮನಂತಿ' 'ವೇದೈಶ್ಚ ಸರ್ವೈರಹಮೇವ ವೇದ್ಯಃ' ಮೊದಲಾದ ಅನೇಕ ಶ್ರುತಿಸ್ಮೃತಿಗಳು ಇದೇ ನಿಲುವನ್ನು ಬಲಪಡಿಸುತ್ತವೆ.

ವೇದಾಂತ ಎಂದಾಕ್ಷಣ, 'ಬರೀ ವೇದಾಂತ ಹೇಳಬೇಡ' 'ನಿನ್ನ ವೇದಾಂತವನ್ನು ಕಟ್ಟಿ ಇಡು' 'ಸಾಕಿನ್ನು ವೇದಾಂತದ ಮಾತುಗಳು ವಾಸ್ತವವನ್ನು ಹೇಳು' ಮೊದಲಾದ ಮಾತುಗಳು ನೆನಪಾಗುತ್ತವೆ. ಇವರ ದೃಷ್ಟಿಯಲ್ಲಿ ವೇದಾಂತ ಶುಷ್ಕ. ಬರಿದು. ಅಂತೆಯೇ ಶುಷ್ಕ ಶಬ್ದಜಾಲಗಳಿಂದ, ವ್ಯರ್ಥವಿತರ್ಕಗಳಿಂದ ಯುಕ್ತವಾಗಿದೆ. ಕಾಲಹರಣದ ಹೊರತು ವೇದಾಂತದಿಂದ ಯಾವ ಪ್ರಯೋಜನವೂ ಇಲ್ಲವೆಂದು ಇವರ ಭಾವ. ಅಲ್ಲದೇ ವೇದಾಂತವಿದು ಪಲಾಯನವಾದವನ್ನು ಪ್ರತಿಪಾದಿಸುತ್ತದೆಂದು ಇವರ ಹಾರ್ದ.

ಒಂದರ್ಥದಲ್ಲಿ ಇವರ ಹಾರ್ದ ಸಮುಚಿತ. ನಿರ್ಗುಣ, ನಿರಾಕಾರ, ನಿರ್ಧರ್ಮಕ, ನಿರಾನಂದ ಒಟ್ಟಾರೆ ನೀರಸವಾದ ಪರಬ್ರಹ್ಮಸ್ವರೂಪದ ಆವಿಷ್ಕಾರಕ್ಕಾಗಿ ಸಂಸಾರವನ್ನು ತೊರೆದು ಕಾಷಾಯಧಾರಿಗಳೋ, ನಿರಂಬರರೋ ಆಗಿ ಭಿಕ್ಷಾಟನ, ದೇಶಾಟನಗಳಿಂದ ಇಹವನ್ನು ದೇಹವನ್ನು ಅಲಕ್ಷ್ಯಮಾಡಿ ವ್ಯಾಪಾರರಹಿತರಾಗಿ ಕಾಲಕಳೆಯಬೇಕೆಂಬ ವ್ಯಾಖ್ಯಾನಗಳಿಂದ ರೋಸಿಹೋಗಿ ಈ ನಿಲುವಿಗೆ ಅವರು ತಲುಪಿದ್ದುದು ಆಶ್ಚರ್ಯವೇನಲ್ಲ.

ಈ ಜನ ನಿರ್ಗುಣ, ನೀರಸ ಬ್ರಹ್ಮವಾಗಲು ನಲಿವು ಒಲವುಗಳಿಗೆ ನಿಲಯವಾದ ಸಂಸಾರವನ್ನು ತೊರೆಯಲು ಸಿದ್ಧರಿಲ್ಲ. ಶುಷ್ಕಪ್ರಯೋಜನಕ್ಕಾಗಿ ಇಹವನ್ನು, ದೇಹವನ್ನು ಅಲಕ್ಷ್ಯಮಾಡಲು ತಯಾರಿಲ್ಲ. ಹೀಗಾಗಿ ವೇದಾಂತ ವಿಚಾರಗಳಿಂದ ಭಯಗೊಂಡು ಬಲು ದೂರವಾಗಿದ್ದಾರೆ.

ಏನೆಲ್ಲ ಸಾಧನೆಗಳನ್ನು ಮಾಡಿದರೂ ಕೊನೆಗೆ ಒಂದೇ ವಿಧವಾದ ಆನಂದ ಎಲ್ಲರಿಗೂ ಆಗುತ್ತದೆಂಬ ವ್ಯಾಖ್ಯಾನಗಳನ್ನು ನೋಡಿ ಈ ವೇದಾಂತಗಳ ಹಂಗು ನಮಗೇಕೆ ಎಂದು ಹಲವರು ವೇದಾಂತಗಳ ಸನಿಹ ಸುಳಿಯುತ್ತಿಲ್ಲ.

ವಿಷಯಗಳ ವಿಲಾಸದಲ್ಲಿ ಮುಳುಗಿ ಮಾಡಬಾರದ್ದನ್ನೆಲ್ಲ ಮಾಡುತ್ತಾ ಸಂಸಾರ ನೀರಸವೆಂದು ಬೋಧಿಸುವವರನ್ನು ಕಂಡು ಹಲವು ಜನ ವೇದಾಂತವನ್ನು ತಪ್ಪಾಗಿ ತಿಳಿದು ದೂರ ಸರಿದಿದ್ದಾರೆ.

ಕಾಲಕ್ರಮೇಣ ಈ ತರಹದ ಅಪಾರ್ಥಗಳು ಬೆಳೆದದ್ದು ಯಥಾರ್ಥವಾದರೂ ಶ್ರೀಮನ್ಮಧ್ವಾಚಾರ್ಯರು ಈ ಎಲ್ಲ ಅಪಾರ್ಥಗಳಿಗೆ ತೆರೆ ಎಳೆದಿದ್ದಾರೆ. ಈ ಎಲ್ಲ ದುರಭಿಪ್ರಾಯಗಳನ್ನು ದೂರಸರಿಸಲು ಧರೆಯಲ್ಲಿ ಅವತರಿಸಿದ ಸಮೀರರಿವರು.

'ಸಂಸಾರದಲ್ಲಿಯೇ ಇದ್ದು ತಮ್ಮ ತಮ್ಮ ಕರ್ತವ್ಯಕರ್ಮಗಳನ್ನು ಆಚರಿಸುತ್ತಲೇ ಧರ್ಮಕ್ಕೆ ವಿರುದ್ಧವಾಗದ, ಅಂತೆಯೇ ಸರಸವಾದ, ಜೀವನಕ್ಕೆ ಹಾನಿಕಾರಕವಾಗದ ಸುಖಗಳನ್ನು ಅನುಭವಿಸುತ್ತಲೇ ಅಪಾಯಕಾರಿಗಳಾದ, ವಿಷತುಲ್ಯವಾದ, ಹೆಚ್ಚಿನ ವಿಷಯಗಳನ್ನು ತ್ಯಜಿಸುತ್ತಾ ಶೋಕದ ಸೊಂಕಿಲ್ಲದ, ಸಂತಸರಸ ತುಂಬಿ ತುಳುಕುವ, ನಮ್ಮ ನಮ್ಮ ಸಾಧನೆ-ಯೋಗ್ಯತೆಗೆ ಅನುಗುಣವಾದ ಪರಮಪದವನ್ನು ಹೇಗೆ ತಲುಪಬಹುದೆಂದು ವೇದಾಂತಗಳು ಬೋಧಿಸುತ್ತವೆ 'ಎಂಬ ವಾದವನ್ನು ತಮ್ಮ ಅಮೋಘ ತರ್ಕಬಲದಿಂದ, ಪರಿಪೂರ್ಣವಾದ ಪ್ರಮಾಣಗಳ ಮೂಲಕ ಆಚಾರ್ಯರು ಪ್ರತಿಪಾದಿಸಿದ್ದಾರೆ.

ಆಚಾರ್ಯರ ಭಾಷ್ಯವನ್ನು ಪರಿತ್ಯಜಿಸಿ ಉಪನಿಷತ್ತುಗಳ ಅರ್ಥವನ್ನು ತಿಳಿಯುತ್ತ ಹೋದರೆ ಉಪನಿಷದಭಿಮಾನಿಗಳಾದ ದೇವತೆಗಳಿಗೆ ಎದೆಗುದಿ ಎನಿಸುತ್ತದೆ. ಓದುಗರಿಗೂ ಆ ಅರ್ಥ ಎದೆ ತಟ್ಟುವದಿಲ್ಲ. ಶ್ರೀಮಟ್ಟೀಕಾಕೃತ್ಪಾದರ ಟೀಕೆ ಇಲ್ಲದಿದ್ದರೆ ಎದೆ ತಟ್ಟುವ ಆ ಅರ್ಥ ಮನದಟ್ಟಾಗುವದಿಲ್ಲ. ಹೀಗಾಗಿ ಟೀಕಾಕೃತ್ಪಾದರ ಟೀಕೆಯ ಮೂಲಕ ಆಚಾರ್ಯರ ಭಾಷ್ಯದ ಭವ್ಯತೆಯನ್ನು ತಿಳಿಯುತ್ತಾ ಉಪನಿಷತ್ತುಗಳನ್ನು ಅಧ್ಯಯನ ಮಾಡಿದವರಿಗೆ ಉಪನಿಷತ್ತುಗಳು ಶುಷ್ಕವಲ್ಲ, ಅಲೌಕಿಕಾನಂದರಸಕಾರಂಜಿಗಳೆಂದು ಅವಗತವಾಗುತ್ತದೆ. ಆಮೇಲೆ ಅಲ್ಲಿ ನೆಟ್ಟ ದೃಷ್ಟಿಯನ್ನು ಹಿಂತೆಗೆದು ಕೊಳ್ಳಲಾರ. ಇಲ್ಲಿ ಪ್ರತಿಪಾದಿತವಾದ ದೇವರ, ದೇವರು ಸೃಜಿಸಿದ ಚರಾಚರ ಪ್ರಪಂಚದ ಅರಿವನ್ನು ಮಾಡಿಕೊಳ್ಳಲು ಮುಂದಾಗುತ್ತಾನೆ. ತತ್ತ್ವಜ್ಞಾನವನ್ನು ಪಡೆಯುವಲ್ಲಿ ಇರುವ ಹಿಗ್ಗನ್ನು ಕಂಡು ನಿಬ್ಬೆರಗಾಗುತ್ತಾನೆ.

ಹೀಗೆ ವೇದಾಂತದ ಸಹವಾಸ ಸೇರುತ್ತಾನೆ. ಉಪ ನಿಷಣ್ಣನಾಗುತ್ತಾನೆ. ಒಂದು ಬಾರಿ ಇಲ್ಲಿಯ ರಸದ ರುಚಿಯನ್ನು ನೋಡಿದವಗೆ ಮೊದಲು ಸರಸವಾಗಿ ಕಂಡ ಸಂಸಾರ ಸಪ್ಪೆ ಎನಿಸುತ್ತದೆ. ಕ್ರಮೇಣ ಸಂಸಾರದ ರುಚಿಯನ್ನು ಜರಿಯುತ್ತಾನೆ. ಕಾಲಕಳೆದಂತೆ, ಬ್ರಹ್ಮಜ್ಞಾನ ಮನದಟ್ಟಾದಂತೆ ಸಂಸಾರ ಮರೆಯಾಗುತ್ತ ಹೋಗುತ್ತದೆ. ಮರ್ತ್ಯನಾದ ತಾನು ಅಮರ್ತ್ಯನಾಗಿ ಮೆರೆಯುತ್ತಾನೆ. ಕಂಗೆಡಿಸುವ ಸಂಸಾರವೆಂಬ ಹೆಗ್ಗಡಲನ್ನು ದಾಟಿ ಜಗಜ್ಜನನಿಯಾದ ಹರಿಯ ಮಡಲಿಗೆ ಸೇರಿ ಶೋಕದ ಸೋಂಕಿಲ್ಲದ ಸುಖವನ್ನು ಸದಾ ಅನುಭವಿಸುತ್ತಿರುತ್ತಾನೆ.

ಇದಿಷ್ಟು ವೇದವೇದಾಂತಗಳು ನಮಗೆ ಮಾಡುವ ಉಪಕಾರ. ಮರೆಯಲಾಗದ ಉಪಕಾರ. ಹೀಗಾಗಿ ಇವುಗಳ ಅಧ್ಯಯನ, ಶ್ರವಣ ಅನಿವಾರ್ಯ.

ಹಿರಿಯರ ವ್ಯಾಖ್ಯಾನಗಳು ಅಧ್ಯಯನವನ್ನು ಪೂರ್ಣಗೊಳಿಸುತ್ತವೆ. ಈ ನಿಟ್ಟಿನಲ್ಲಿ ಉಪಲಬ್ಧವಾದ ಎಲ್ಲ ವ್ಯಾಖ್ಯಾನಗಳಿಂದ ಯುಕ್ತವಾಗಿ ಪ್ರಸಕ್ತ ನಿಮ್ಮ ಕೈಸೇರಿದ ಗ್ರಂಥ ಈಶಾವಾಸ್ಯೋಪನಿಷದ್ಭಾಷ್ಯ. ಹದಿಮೂರು ವ್ಯಾಖ್ಯಾನಗಳಿಂದ ಇದು ಯುಕ್ತವಾಗಿದೆ.

೧.ಶ್ರೀಮಜ್ಜಯತೀರ್ಥರು ವಿರಚಿಸಿದ ಟೀಕಾ, ೨.ಶ್ರೀವಾಮನಪಂಡಿತಾಚಾರ್ಯರ ವ್ಯಾಖ್ಯಾನ, ೩.ಶ್ರೀವಾದಿರಾಜತೀರ್ಥರ ಗುರ್ವರ್ಥದೀಪಿಕಾ, ೪.ಶ್ರೀ ಶ್ರೀನಿವಾಸತೀರ್ಥರ ಟಿಪ್ಪಣಿ, ೫.ಶ್ರೀಛಲಾರಿನೃಸಿಂಹಾಚಾರ್ಯರ ಟೀಕಾಪಂಚಿಕಾ, ೬.ಸತ್ಯವ್ರತರ ಶಿಷ್ಯರಾದ ಶ್ರೀಸತ್ಯಪ್ರಜ್ಞರ ಭಾವಪ್ರಕಾಶಿಕಾ, ೭.ಶ್ರೀಪೂರ್ಣಬೋಧರ ಶಿಷ್ಯರಾದ ಶ್ರೀನರಸಿಂಹಾಚಾರ್ಯರ ದುರ್ಗಮವಾಕ್ಯಾರ್ಥವಿವರಣ, ೮.ಕಲ್ಲಾಪುರ ಶ್ರೀನಿವಾಸಾಚಾರ್ಯರ ಭಾಷ್ಯವಾಕ್ಯಾರ್ಥ, ೯.ಶ್ರೀ ಕಂಚೀ ರಘುನಾಥಾಚಾರ್ಯರ ಟೀಕಾವಿವೃತಿ, ೧೦.ಶ್ರೀರಾಘವೇಂದ್ರಸ್ವಾಮಿಗಳ ಖಂಡಾರ್ಥ, ೧೧.ಶ್ರೀವಿದ್ಯಾಧೀಶರ ಶಿಷ್ಯರಾದ ಶ್ರೀನೃಸಿಂಹಭಿಕ್ಷುಗಳ ಖಂಡಾರ್ಥಪ್ರಕಾಶಿಕಾ, ೧೨.ಶ್ರೀಅನಂತಭಟ್ಟರ ಯಾಜ್ಞೀಯಮಂತ್ರವೃತ್ತಿ ೧೩.ಶ್ರೀಕೃಷ್ಣಾವಧೂತರ ಈಶಾವಾಸ್ಯಪ್ರಭಾ.

ಈ ಭಾಷ್ಯಕ್ಕೆ ಶ್ರೀರಘುನಾಥರದ್ದು ಅತಿ ವಿಸ್ತಾರವಾದ ವ್ಯಾಖ್ಯಾನ. ಈ ರಘುನಾಥರು ಯಾರೆಂಬುದು ವಿಚಾರಣೀಯವಾಗಿದೆ. ಶೇಷಚಂದ್ರಿಕಾಚಾರ್ಯರೆಂದು ಬಿರುದಾಂಕಿತರಾದ ವ್ಯಾಸರಾಜಮಠಾಧೀಶರಾದ ರಘುನಾಥತೀರ್ಥರು ಇದರ ಕರ್ತೃಗಳಲ್ಲ. ಶೇಷಚಂದ್ರಿಕಾ, ಬೃಹತೀಸಹಸ್ರವ್ಯಾಖ್ಯಾನ, ತಂತ್ರಸಾರ ವ್ಯಾಖ್ಯಾನಗಳಲ್ಲಿ ಇದ್ದಂತೆ ಮಂಗಳಾಚರಣೆ ಇಲ್ಲಿ ಇಲ್ಲ. ವ್ಯಾಖ್ಯಾನದ ಶೈಲಿಯಲ್ಲಿಯೂ ಭಿನ್ನತೆ ಕಾಣುತ್ತದೆ. ಅಲ್ಲಲ್ಲಿ ರಘೂತ್ತಮತೀರ್ಥರ ಬೃಹದಾರಣ್ಯಭಾವಬೋಧವನ್ನು ಉಲ್ಲೇಖಿಸಿ ವಿಷಯವನ್ನು ಪ್ರತಿಪಾದಿಸುತ್ತಾರೆ. ಆದ್ದರಿಂದ ಇದರ ಕರ್ತೃಗಳು ಶೇಷಚಂದ್ರಿಕಾಚಾರ್ಯರು ಅಲ್ಲವೆಂದು ತೋರುತ್ತದೆ. ಈ ಅಭಿಪ್ರಾಯವನ್ನು ಗೋಪಾಲಕೃಷ್ಣಾಚಾರ್ಯ ಗೌಡಗೆರಿ ಅವರು ತಮ್ಮ ಗ್ರಂಥಮಾಲಿಕಾ ಪ್ರಸರದಲ್ಲಿ ವ್ಯಕ್ತಮಾಡಿದ್ದಾರೆ.

ಜೊತೆಗೆ ಉತ್ತರಾದಿಮಠದಲ್ಲಿ ಸಿಕ್ಕಿರುವ ಪ್ರಾಚೀನವಾದ ಒಂದು ಹಸ್ತಪ್ರತಿಯಲ್ಲಿ ಕಂಚೀ ರಘುನಾಥಾಚಾರ್ಯ ವಿರಚಿತವೆಂದು ಇದೆ. ಪಂ. ವ್ಯಾಸನಕೆರೆ ಪ್ರಭಂಜನಾಚಾರ್ಯರು ತಮ್ಮ ಸಂಗ್ರಹದಲ್ಲಿರುವ ಹಸ್ತಪ್ರತಿಯಲ್ಲಿಯೂ ಕಂಚೀ ರಘುನಾಥಾಚಾರ್ಯರ ರಚನೆ ಎಂಬುದಾಗಿಯೇ ಇದೆ ಎಂದು ಹೇಳುತ್ತಾರೆ. ಆದರೆ ಇವರ ವಿಶೇಷವಾದ ಪರಿಚಯ ದೊರೆತಿಲ್ಲ. ಇವರ ವ್ಯಾಖ್ಯಾನದ ಶೈಲಿ ರಮಣೀಯ. ವಿಷಯಗಳ ವಿಸ್ತಾರವಾದ ನಿರೂಪಣೆ ಇವರ ವ್ಯಾಖ್ಯಾನದಲ್ಲಿ ಇದೆ.

ಹೀಗೆ ಹದಿಮೂರು ವ್ಯಾಖ್ಯಾನಗಳಿಂದ ಯುಕ್ತವಾದ ಈ ಗ್ರಂಥವು ವಿಶ್ವಮಧ್ವಮಹಾಪರಿಷತ್ತಿನಿಂದ ಪ್ರಕಾಶಿತವಾಗಿದೆ. ಇದರ ಸದುಪಯೋಗವನ್ನು ಎಲ್ಲರೂ ಪಡೆದುಕೊಳ್ಳಬೇಕಾಗಿ ಸವಿನಯ ಪ್ರಾರ್ಥನೆ.

## ಕೃತಜ್ಞತಾಸಮರ್ಪಣೆ

ಈ ಪ್ರಕಾಶನದ ಜೀವಾಳ ಪ್ರಾತಃಸ್ಮರಣೀಯರಾದ, ಪರಮಪೂಜ್ಯರಾದ ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರು. ಇವರು ಸಂಗ್ರಹಿಸಿದ ಉತ್ತರಾದಿಮಠದ ಗ್ರಂಥಾಲಯದಲ್ಲಿ ಕಲ್ಲಾಪುರ ಶ್ರೀನಿವಾಸಾಚಾರ್ಯರ ಭಾಷ್ಯವಾಕ್ಯಾರ್ಥ ಹಾಗೂ ಅನಂತಭಟ್ಟರ ಯಾಜ್ಞೀಯಮಂತ್ರವೃತ್ತಿ ಈ ಎರಡು ಅಪ್ರಕಟಿತವಾದ ವ್ಯಾಖ್ಯಾನಗಳು ಅಲ್ಲದೇ ಉಳಿದ ವ್ಯಾಖ್ಯಾನಗಳ ಹಸ್ತಪ್ರತಿಗಳು ಕೂಡಾ ಉಪಲಬ್ಧವಾಗಿವೆ. ಗ್ರಂಥದ ಶುದ್ಧಿಗಾಗಿ ಈ ಎಲ್ಲ ಹಸ್ತಪ್ರತಿಗಳ ಉಪಯೋಗವನ್ನು ಪಡೆಯಲಾಗಿದೆ. ಪರಮಪೂಜ್ಯರಾದ ಅವರ ಚರಣಕಮಲಗಳಲ್ಲಿ ಭಕ್ತಿಶ್ರದ್ಧಾಪೂರ್ವಕವಾದ ಅನಂತಾನಂತಶಿರಸಾಷ್ಟಾಂಗ ಪ್ರಣಾಮಗಳು.

ಈ ಸಂಶೋಧನೆಯ ಕಾರ್ಯದಲ್ಲಿ ನಮಗೆ ಎಲ್ಲ ರೀತಿಯಲ್ಲಿಯೂ ಬೆಂಬಲವಾಗಿರುವ ಸದಾ ಪಾಠಪ್ರವಚನಗಳಲ್ಲಿ, ಮಧ್ವಮತಸಿದ್ಧಾಂತದ ಪ್ರಚಾರದಲ್ಲಿ ನಿರತರಾಗಿದ್ದರೂ ಈ ಪ್ರಯತ್ನಕ್ಕೆ ಆಶೀರ್ವಚನವನ್ನು ನೀಡಿರುವ ವಿದ್ಯಾಗುರುಗಳ (ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು) ಸನ್ನಿಧಿಗೆ ಮತ್ತೆ ಮತ್ತೆ ಅನಂತಾನಂತ ಶಿರಸಾಷ್ಟಾಂಗ ಪ್ರಣಾಮಗಳು.

ಬಿಡುವಿಲ್ಲದೇ ಪಾಠಪ್ರವಚನದಲ್ಲಿ ತಲ್ಲೀನರಾದರೂ ತಮ್ಮ ಅಮೂಲ್ಯ ಸಲಹೆಗಳಿಂದ ನಮ್ಮ ಏಳಿಗೆಗೆ ಕಾರಣರಾದ ಶ್ರೀಜಯತೀರ್ಥವಿದ್ಯಾಪೀಠದ ಕುಲಪತಿಗಳಾದ ಪಂ.ಪೂ.ಆಚಾರ್ಯರವರಿಗೆ (ಶ್ರೀ ರಂಗಾಚಾರ್ಯ ಗುತ್ತಲ) ಸಾಷ್ಟಾಂಗ ಪ್ರಣಾಮಗಳು.

ಬೇಸರವಿಲ್ಲದೇ ನಮ್ಮ ಅಭಿವೃದ್ಧಿಗೆ ಪದೇ ಪದೇ ಎಚ್ಚರ ನೀಡುತ್ತಿರುವ, ಗುರುಗಳಾದ ಸತ್ಯಧ್ಯಾನವಿದ್ಯಾಪೀಠದ ಕುಲಪತಿಗಳಾದ ಪಂ.ಪೂ ಆಚಾರ್ಯರಿಗೆ (ಶ್ರೀ ವಿದ್ಯಾಸಿಂಹಾಚಾರ್ಯ ಮಾಹುಲಿ) ಸಾಷ್ಟಾಂಗ ಪ್ರಣಾಮಗಳು.

ಸಂಶೋಧನೆಯ ಎಲ್ಲ ಹಂತಗಳಲ್ಲಿಯೂ ಅಮೂಲ್ಯವಾದ, ಸೂಕ್ತವಾದ ಸಲಹೆಗಳನ್ನು ನೀಡುತ್ತಿರುವ ಪಂ. ವಿದ್ಯಾಧೀಶಾಚಾರ್ಯ ಗುತ್ತಲ ಇವರಿಗೆ ನನ್ನ ನಮಸ್ಕಾರಗಳು.

ನಾವು ಕೇಳಿದಾಗಲೆಲ್ಲ ಇಲ್ಲವೆನ್ನದೇ ತಮ್ಮಲ್ಲಿಯ ಅಪೂರ್ವ ವ್ಯಾಖ್ಯಾನಗಳ ಹಸ್ತಪ್ರತಿಗಳನ್ನು ನೀಡುತ್ತಿರುವ ಪ್ರಸಕ್ತ ದುರ್ಗಮವಾಕ್ಯಾರ್ಥವಿವರಣೆಯ ಎರಡು ಹಸ್ತಪ್ರತಿಗಳನ್ನು ನೀಡಿದ ಪಂ. ವ್ಯಾಸನಕೆರೆ ಪ್ರಭಂಜನಾಚಾರ್ಯರಿಗೆ ಕೃತಜ್ಞತಾಪೂರ್ವಕ ವಂದನೆಗಳು.

ಕರಡುಪ್ರತಿಯನ್ನು ತಿದ್ದುವದಕ್ಕಾಗಿ ಕೇಳಿದಾಗಲೆಲ್ಲ ಸಹಾಯಮಾಡಿದ ಪಂ. ಜಯತೀರ್ಥಾಚಾರ್ಯ ಪುರಾಣಿಕ್ ಹಾಗೂ ಪಂ.ಮಾಧವಾಚಾರ್ಯ ಟಿ. ವಿ ಇವರಿಗೆ ಮತ್ತು ಈ ಗ್ರಂಥ ಅಚ್ಚುಕಟ್ಟಾಗುವಂತೆ ಜೋಡಣೆ ಮಾಡಿದ ಪಂ. ಮಹಿದಾಸಾಚಾರ್ಯ ಜೋಷಿ ಇವರಿಗೆ, ಸುಂದರವಾಗಿ ಮುಖಪುಟವಿನ್ಯಾಸಮಾಡಿದ ಶ್ರೀ ಗೋವಿಂದ ನವಲಿ ಇವರಿಗೆ , ಈಗ್ರಂಥದ ಮುದ್ರಣಕ್ಕೆ ಸಮಗ್ರವಾಗಿ ಆರ್ಥಿಕ ಸಹಾಯಮಾಡಿದ ಶ್ರೀ ಎಮ್.ಬಿ ರಾಘವೇಂದ್ರಮೂರ್ತಿ ಶ್ರೀಮತಿ ಪ್ರಭಾವತಿ ದಂಪತಿಗಳಿಗೆ, ಸಮಯಕ್ಕೆ ಸರಿಯಾಗಿ ಓರಣವಾಗಿ ಮುದ್ರಿಸಿದ ವಾಗರ್ಥ ಮುದ್ರಣಾಲಯದವರಿಗೆ ಕೃತಜ್ಞತೆಗಳು.

ಈ ಗ್ರಂಥದಲ್ಲಿ ಪ್ರಕಾಶಿತವಾದ ಕಲ್ಲಾಪುರ ಆಚಾರ್ಯರ ಹಾಗೂ ಅನಂತಭಟ್ಟರ ವ್ಯಾಖ್ಯಾನಗಳ ಹೊರತು ಉಳಿದ ಹತ್ತು ವ್ಯಾಖ್ಯಾನಗಳು ಡಾ. ಎನ್. ಶಾನಭಾಗ ಇವರ ಸಂಪಾದಕತ್ವದಲ್ಲಿ ಮುದ್ರಿತವಾಗಿವೆ. ಇದಲ್ಲದೇ ಶ್ರೀವಾಮನಪಂಡಿತಾಚಾರ್ಯರ ವ್ಯಾಖ್ಯಾನವೂ ಸಹ ಈಗಾಗಲೇ ಈಶಾವಾಸ್ಯಪ್ರತಿಷ್ಠಾನದಿಂದ ಶ್ರೀ ಪಂ. ಬನ್ನಂಜೆ ಗೋವಿಂದಾಚಾರ್ಯರ ಸಂಪಾದಕತ್ವದಲ್ಲಿ ಪ್ರಕಟಿತವಾಗಿದೆ. ಪ್ರಸಕ್ತಮುದ್ರಣಕ್ಕೆ ಆ ಪುಸ್ತಕದ ಸಹಾಯವನ್ನೂ ಪಡೆದುಕೊಳ್ಳಲಾಗಿದೆ. ಅವರೆಲ್ಲರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

ಇದರಲ್ಲಿರಬಹುದಾದ ತಪ್ಪುಗಳನ್ನು ಸಹಿಸಿ ಹರಿಸಬೇಕೆಂದು ಸುಜನರಲ್ಲಿ ಸವಿನಯವಾಗಿ ಪ್ರಾರ್ಥಿಸುತ್ತೇನೆ.

ಇತಿ

ವಿದ್ವದ್ವಿಧೇಯ

ವಾದಿರಾಜ ಕರಣಮ್

# ಈಶಾವಾಸ್ಯೋಪನಿಷತ್ ಸಾರಸಂಗ್ರಹ

ನರ ಮಾಡುವ ನಿರಂತರ ಪ್ರಯತ್ನವೆಲ್ಲವೂ 'ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ' ಎಂಬುದು ಲೋಕದ ನುಡಿ. ಹೊಟ್ಟೆಗಾಗಿ ಮಾಡಿದರೂ ಗೇಣು ಬಟ್ಟೆಗಾಗಿ ಮಾಡಿದರೂ ದೇವದೇವನ ಆಣತಿಗನುಗುಣವಾಗಿರಬೇಕು. ಇದೆಲ್ಲವೂ ಭಗವಂತನ ಭಾಗ್ಯವೆಂದು ಬಗೆಯಬೇಕು. ನಮ್ಮ ಭಾಗಕ್ಕೆ ಮಿಗಿಲಿದ್ದು ಮಾತ್ರ ಭೋಗಿಸಬೇಕು. ಆದಾಗ ಶ್ರೀಹರಿ ಕರುಣೆಯ ಕಟಾಕ್ಷದಿಂದ ನಮ್ಮನ್ನು ಈಕ್ಷಿಸುತ್ತಾನೆ. ಈ ಈಕ್ಷಣವೆ ಸಾಕು. ಈ ಕ್ಷಣದ ತಲ್ಲಣಗಳನ್ನು ಮತ್ತೆ ನಮ್ಮತ್ತ ಸುಳಿಯದಂತೆ ತಳ್ಳಿ ಹಾಕುತ್ತದೆ. ಇದು ವೇದವೇದಾಂತಗಳ ಆದೇಶ. ಈ ಮೂಲಕ ದೇವರು ನೀಡಿದ ಉಪದೇಶವಿದು. ಇಂತಹ ಅನೇಕ ಆದೇಶ ಉಪದೇಶಗಳ ಗಣಿ ಯಾಜ್ಞೀಯಮಂತ್ರೋಪನಿಷತ್. ಯಜ್ಞನಾಮಕನಾದ ಭಗವಂತನನನ್ನು ಪ್ರತಿಪಾದಿಸುತ್ತದೆ ಆದ್ದರಿಂದ ಈ ಹೆಸರು ಅನ್ವರ್ಥಕ. ಇದು 'ಈಶಾವಾಸ್ಯಂ' ಎಂದು ಮೊದಲಾಗುತ್ತದೆ. ಹೀಗಾಗಿ ಲೋಕದಲ್ಲಿ 'ಈಶಾವಾಸ್ಯೋಪನಿಷತ್' ಎಂದು ಪ್ರಸಿದ್ಧಿ ಪಡೆದಿದೆ. ಇನ್ನೂ ಕ್ಲುಪ್ತವಾಗಿ ಇದನ್ನು 'ಈಶೋಪನಿಷತ್' ಎಂದು ವ್ಯವಹರಿಸುತ್ತಾರೆ.

ಇದು ಶುಕ್ಲಯಜುರ್ವೇದದ ಉಪನಿಷತ್.

ಸಾಧಾರಣವಾಗಿ ಉಪನಿಷತ್ತುಗಳೆಲ್ಲ ಬ್ರಾಹ್ಮಣಗಳ, ಆರಣ್ಯಕಗಳ ನಡುವೆ ಅಥವಾ ಕೊನೆಯಲ್ಲಿ ಸೇರಿರುತ್ತವೆ. ಆದರೆ ಈ ಉಪನಿಷತ್ತು ಮಾತ್ರ ಸಾಕ್ಷಾತ್ ಶುಕ್ಲಯಜುಃಸಂಹಿತೆಯ ಅಂತಿಮಭಾಗವಾಗಿದೆ. ಇದು ಇದರ ವೈಶಿಷ್ಟ್ಯ.

ಸರಸ, ಸುಂದರ, ಸರ್ವೋಪನಿಷತ್ಸಂಗ್ರಹರೂಪವಾದ ಈ ಉಪನಿಷತ್ತಿಗೆ ಭಾಷ್ಯ ರಚಿಸುತ್ತಾ ಆಚಾರ್ಯರು ಮಂಗಲಾಚರಣೆ ಮಾಡುತ್ತಾರೆ.

'ಸಮಾಪ್ತಿಕಾಮೋ ಮಂಗಲಮಾಚರೇತ್' ತೊಡರುಗಳಿಲ್ಲದೇ ಗ್ರಂಥದ ಪರಿಸಮಾಪ್ತಿಯಾಗಬೇಕು. ಈ ತವಕವಿದ್ದವರು ಮಂಗಲಾಚರಣೆ ಮಾಡಬೇಕು. ಆದರೆ ಅಸುರಾವೇಶವಿಲ್ಲದ ಅಂತೆಯೇ ಜೀವೋತ್ತಮರಾದ ಆಚಾರ್ಯರಿಗೆ ಅಡ್ಡಿಗಳ ಆತಂಕವೇನೂ ಇಲ್ಲ. ಆದರೂ ಇದನ್ನು ಅಧ್ಯಯನ ಮಾಡುವ ಶಿಷ್ಯರು ತೊಡಕುಗಳಿಗೆ ಸಿಲುಕದೇ ತತ್ತ್ವಜ್ಞಾನವನ್ನು ಪಡೆಯಲಿ ಎಂಬ ಕರುಣೆ ಹಾಗು ಹರಿಯ ಆಜ್ಞೆ ಮಂಗಲಾಚರಣೆಗೆ ಪ್ರೇರಕವಾಗಿವೆ. ಶಿಷ್ಯರಾದವರು ಗ್ರಂಥಗಳನ್ನು ರಚಿಸುವಾಗ ಮಂಗಲಾಚರಣೆ ಮಾಡಲೇಬೇಕೆಂಬ ಶಿಕ್ಷಣೆಯೂ ಇದಕ್ಕೆ ಹಿನ್ನೆಲೆಯಾಗಿದೆ.

ನಿತ್ಯಾನಿತ್ಯಜಗದ್ಧಾತ್ರೇ ನಿತ್ಯಾಯ ಜ್ಞಾನಮೂರ್ತಯೇ ।
ಪೂರ್ಣಾನಂದಾಯ ಹರಯೇ ಸರ್ವಯಜ್ಞಭುಜೇ ನಮಃ ॥

**ಸರ್ವಯಜ್ಞಭುಜೇ** –

ಈ ಉಪನಿಷತ್ಪ್ರತಿಪಾದ್ಯನಾದ ದೇವತೆ ಯಜ್ಞ. ಈ ಯಜ್ಞ ಎಂದು ಹೆಸರಿದ್ದವರು ಇಬ್ಬರಿದ್ದಾರೆ. ಒಬ್ಬನು ಇಂದ್ರನ ಮಗ.

ಆಕೂತಿ, ರುಚಿಪ್ರಜಾಪತಿಗಳ ಸುಕೃತಪರಿಪಾಕದಿಂದ ಅವತರಿಸಿದ ಹರಿಯು ಕೂಡಾ ಯಜ್ಞ. ಹಾಗಾದರೆ ಇಲ್ಲಿ ಪ್ರತಿಪಾದ್ಯನಾದವನು ಯಾರೆಂದು ಗೊಂದಲವಾಗುವದು ಸಹಜ. ಮುಂದೆ ಆಚಾರ್ಯರು ನೀಡುವ ಭಾಗವತ ಹಾಗೂ ಬ್ರಹ್ಮಾಂಡ ಪುರಾಣಗಳ ಪ್ರಮಾಣದಿಂದ ಈ ಸಮಸ್ಯೆಯ ಪರಿಹಾರವಾಗುತ್ತದೆ. ಹಾಗಿದ್ದರೂ ಇಲ್ಲಿ 'ಯಜ್ಞಾಯ' ಎಂದು ಮಾತ್ರ ಹೇಳದೇ 'ಯಜ್ಞಭುಜೇ' ಎಂದು ಹೇಳುತ್ತಾ ಆಚಾರ್ಯರು ಈ ಸಮಸ್ಯೆಯ ಪರಿಹಾರವನ್ನು ಸೂಚಿಸಿದ್ದಾರೆ.

ಇಂದ್ರಸೂನು ಯಜ್ಞರೂಪಕ್ರಿಯಾಕ್ಕೆ ಅಭಿಮಾನಿ ಮಾತ್ರ. ಹೀಗಾಗಿ ಅವನು ಯಜ್ಞಶಬ್ದವಾಚ್ಯ. ಇವನನ್ನು ಪ್ರತಿಪಾದಿಸುವ ಲಿಂಗಗಳಾವೂ ಇಲ್ಲಿ ಇಲ್ಲ. ಹೀಗಾಗಿ ಪ್ರತಿಪಾದ್ಯನಾಗಲಾರ. ಯಜ್ಞಭೋಕ್ತೃವಾದ ಅಂತೆಯೇ ಯಜ್ಞೇಶನಾದ ಶ್ರೀಹರಿ ಪರಮಮುಖ್ಯವೃತ್ತಿಯಿಂದ ಯಜ್ಞನಾಮಕನಾಗಿದ್ದಾನೆ. ಅವನನ್ನು ಪ್ರತಿಪಾದಿಸುವ ನಿರ್ಭಯತ್ವ, ಪ್ರಧಾನತ್ವ ಮೊದಲಾದ ಲಿಂಗಗಳೇ ಈ ಉಪನಿಷತ್ತಿನಲ್ಲಿ ತುಂಬಿಕೊಂಡಿವೆ. ಆದ್ದರಿಂದ ಈ ಯಜ್ಞನಾಮಕ ಪರಮಾತ್ಮನೇ ಇಲ್ಲಿ ಪ್ರತಿಪಾದ್ಯದೇವತೆ ಎಂಬುದು ಗಮನಾರ್ಹ.

**ಪೂರ್ಣಾನಂದಾಯ** –

ಭಗವಂತನ ಭೋಗ ಬಲು ವಿಚಿತ್ರ. ಭಕ್ತರು ಸಮರ್ಪಿಸಿದ ವಿಹಿತವಾದ ವಿಷಯಗಳಲ್ಲಿರುವ, ಜೀವನ ಇಂದ್ರಿಯಗಳಿಗೆ ಗೋಚರಿಸದ ಅಂತೆಯೇ ಸೂಕ್ಷ್ಮವಾದ ಸ್ವಾಖ್ಯ ರಸವನ್ನು ಭಗವಂತ ತನ್ನ ಮುಖದಿಂದ ಭೋಗ ಮಾಡುತ್ತಾನೆ. ಸದಾ ಭಗವಂತ ತನ್ನ ಮುಖದಿಂದ ಭೋಗಮಾಡುವ ವಿಧಾನವಿದು. ರಮಾಖ್ಯರಸವನ್ನು ಭಗವಂತ ನಾಸಿಕೆಯಿಂದ ಆಘ್ರಾಣನೆ ಮಾಡುತ್ತಾನೆ. ಸ್ಥೂಲವನ್ನು ಕಣ್ಣಿನಿಂದ ನೋಡುತ್ತಾನೆ ಮಾತ್ರ. ಇದು ಹೀಗಿದ್ದರೂ ರಾಮಕೃಷ್ಣಾದಿ ಅವತಾರರೂಪಗಳಿಂದ ಜೀವಭೋಗ್ಯವಾದ ಸ್ಥೂಲವಿಷಯಗಳನ್ನೂ ಭಗವಂತ ಮುಖದಿಂದಲೇ ಭೋಗಮಾಡುತ್ತಾನೆ.

ಆದರೆ ಈ ಯಾವ ಭೋಗಗಳೂ ಆನಂದ ಪಡೆಯುವ ಆರಾಟದಿಂದಲ್ಲ. ಏಕೆಂದರೆ ಭಗವಂತ **ಪೂರ್ಣಾನಂದ**.

ಶ್ರೀಹರಿ ಪೂರ್ಣಾನಂದನಾಗಿದ್ದರೂ ಶಕ್ತಿರೂಪದಿಂದಿರುವ ಆನಂದದ ಅಭಿವ್ಯಕ್ತಿಗಾಗಿ ಈ ವಿಧವಿಧದ ಭೋಗವೆಂದು ಸಮಾಧಾನ ಪಡಬಹುದೇ ? ಇಲ್ಲ, ಇದು ಹೀಗಲ್ಲ.

ಮುಂದೆ ಆಗಬಹುದಾದ ಆನಂದವೂ ಭಗವಂತನಿಗೆ ಮೊದಲು ವ್ಯಕ್ತವಾಗಿಯೇ ಇದೆ. ಆದ್ದರಿಂದ ನಿತ್ಯವ್ಯಕ್ತವಾದ ಸುಖದ ವ್ಯಕ್ತಿಗಾಗಿಯೇ ಈ ಭೋಗ ಎನ್ನುವದು ಸೂಕ್ತ.

ಶಕ್ತಿಯ ವ್ಯಕ್ತಿಯಾಗಬಹುದು. ವ್ಯಕ್ತಿಯ ವ್ಯಕ್ತಿ ಇದು ದುರ್ಘಟವಲ್ಲವೇ ? ಅಲ್ಲ, ಸರ್ವಥಾ ಅಲ್ಲ. ಹರಿಯ ಅಚಿಂತ್ಯಶಕ್ತಿಗೆ ಎಲ್ಲವೂ ಸುಘಟವೇ. ಅಂತೆಯೇ ಅದು ಅಘಟಿತಘಟನಾಪಟೀಯಸೀ. ಅಂದ ಮಾತ್ರಕ್ಕೆ ಈ ನಿತ್ಯವ್ಯಕ್ತವಾದ ಸುಖದ ವ್ಯಕ್ತಿಯೇ ಪ್ರಯೋಜನವೆಂದು ಹೇಳಲು ತರವಲ್ಲ. ಈ ಎಲ್ಲ ಭೋಗಗಳೂ ಲೀಲಾರೂಪಮಾತ್ರ. ಹೀಗಾಗಿ ಭಕ್ತರ ಅಭೀಷ್ಟವನ್ನು ತಂದುಕೊಡುವದೇ ನಿತ್ಯವ್ಯಕ್ತಸುಖದ ವ್ಯಕ್ತಿಯ ಉದ್ದೇಶವೇ ಹೊರತು ಸ್ವಪ್ರಯೋಜನದ ಉದ್ದೇಶ ಅಲ್ಪವೂ ಇಲ್ಲ. ಇದು ಕಂಚೀ ರಘುನಾಥಾಚಾರ್ಯರ ಪ್ರತಿಪಾದನೆ.

**ನಿತ್ಯಾನಿತ್ಯಜಗದ್ಧಾತ್ರೇ –**

ಭಗವಂತ ಪೂರ್ಣಾನಂದ ಎನ್ನುವದು ಸಿದ್ಧವಾದಲ್ಲಿ ಮೇಲೆ ತಿಳಿದ ವಿಷಯಗಳು ಸ್ವರಸವಾಗುತ್ತವೆ. ಆದ್ದರಿಂದ ಪೂರ್ಣಾನಂದತ್ವವನ್ನು ಪ್ರತಿಪಾದಿಸಲು ಆಚಾರ್ಯರು ನೀಡಿದ ಯುಕ್ತಿ ಇದು.

ನಿತ್ಯಾನಿತ್ಯಜಗತ್ತನ್ನು ನಿಯಮಿಸುವ ಹರಿ ಪೂರ್ಣಾನಂದನಾಗಿರಲು ಸಾಕು. ಪೂರ್ಣಾನಂದನಾಗದಿದ್ದಲ್ಲಿ ಪರಮಾತ್ಮನ ಶಕ್ತಿ ಅಪರ್ಯಾಪ್ತವೆಂದಾಗುತ್ತದೆ. ಆದಾಗ ಸರ್ವವನ್ನೂ ನಿಯಮಿಸಲಾರ. ಹಾಗಾದಲ್ಲಿ ಪರಪ್ರೇರಣೆಯ ಅಪೇಕ್ಷೆ ಇರುವ ಯಾರೂ ಯಾವ ಕರ್ಮಗಳನ್ನೂ ಮಾಡಲಾರರು. ಹೀಗಾಗಿ ಚೇಷ್ಟೆಯೇ ಅಸಂಭಾವಿತವೆಂದಾಗುತ್ತದೆ. ಜಗತ್ತೇ ಪ್ರೇರಕವೆನ್ನೋಣವೆಂದರೆ ಅದು ತಾನೇ ಅಸ್ವತಂತ್ರ. ಸ್ವಯಂ ಪ್ರವೃತ್ತಿಯನ್ನು ಪಡೆಯದ ಜಗತ್ತು ಇನ್ನೊಂದನ್ನು ಮತ್ತೊಂದನ್ನು ಪ್ರೇರಿಸಲು ಅಸಮರ್ಥ. ಇದು ಬರೀ ಹೇಳಿಕೆಯಲ್ಲ, ಪ್ರಮಾಣಗಳಿಂದ ಸಿದ್ಧವಾಗಿದೆ.

ಹೀಗೆ ಪ್ರವರ್ತಕವಾದುದು ಮತ್ತೊಂದಿಲ್ಲದ ಕಾರಣ ವಿಷ್ಣುವೇ ಪ್ರವರ್ತಕ ಎಂದು ಒಡಂಬಡಬೇಕು. ಅವನು ಸಂಪೂರ್ಣಶಕ್ತಿ ಎಂತಲೂ ಅಂಗೀಕರಿಸಬೇಕು. ಸಂಪೂರ್ಣಶಕ್ತಿ ಇದ್ದವನು ಪೂರ್ಣಾನಂದನೆನ್ನಲು ಯಾವ ಅಡ್ಡಿ ಆತಂಕಗಳಿಲ್ಲ. ತನ್ನಲ್ಲಿಯ ಅಲ್ಪತನವನ್ನು ಬಗೆಹರಿಸಿಕೊಳ್ಳದವನು ಹೇಗೆ ಸಂಪೂರ್ಣಶಕ್ತಿಯಾದಾನು. ಆದ್ದರಿಂದ ವಿಷ್ಣು ಸರ್ವಶಕ್ತ ಅಂತೆಯೇ **ಪೂರ್ಣಾನಂದ**.

ಭಗವಂತ ಅನಿತ್ಯವಾದ ಜಗತ್ತಿಗೆ ಮಾತ್ರ ಪ್ರೇರಕನಲ್ಲ. ನಿತ್ಯವಾದುದಕ್ಕೂ ನಿಯಾಮಕ. ಇದನ್ನು ಹೀಗೆ ವಿವರಿಸಬಹುದು.

ಅನಿತ್ಯತ್ವ ಇದು ಘಟಾದಿಗಳ ಸ್ವಭಾವ. ಆದರೂ ಅವುಗಳ ಅನಿತ್ಯತೆ ಆಕಸ್ಮಿಕವೇನಲ್ಲ. ಹಾಗಾದಲ್ಲಿ ಹುಟ್ಟಿದ ಮುಂದಿನ ಕ್ಷಣದಲ್ಲಿಯೇ ನಾಶವಾಗಬೇಕು. ಹಾಗೆಯೇ ಆಗುವದಿಲ್ಲ. ಆದ್ದರಿಂದ ಅನಿತ್ಯತೆ ಭಗವಂತನ ಅಧೀನ. ಪರಾಧೀನ ಎಂದ ಮಾತ್ರಕ್ಕೆ ಘಟಾದಿಗಳು ನಿತ್ಯವಾಗಬೇಕಿಲ್ಲ. ಘಟಾದಿಗಳ ವಿನಾಶಕ್ಕೆ ಕಾರಣವಾದ ಸಾಮಗ್ರಿಗಳು ಹರಿಯ ಪ್ರೇರಣೆಯಿಂದ ಆಯಾ ಕಾಲದಲ್ಲಿ ಬಂದೊದಗುತ್ತವೆ. ಇದು ನಿಶ್ಚಿತ. ಹೀಗೆಯೇ ನಿತ್ಯವಾದ ಪದಾರ್ಥಗಳಲ್ಲಿಯ ನಿತ್ಯತೆಯೂ ಪರಾಧೀನವೆಂದಲ್ಲಿ ಅನಿತ್ಯತ್ವದ ಪ್ರಸಕ್ತಿ ಇಲ್ಲ. ಇಲ್ಲಿಯ ನಿತ್ಯತ್ವವನ್ನು ಭಗವಂತ ಯಾವಾಗಲೂ ನಿಯಮಿಸುತ್ತಲೇ ಇರುತ್ತಾನೆ. ನಿತ್ಯವಾದುದನ್ನು ನಾಶಗೊಳಿಸುವ ಸಾಮರ್ಥ್ಯವಿದ್ದರೂ ಆ ತರಹದ ಕಾರಣಗಳನ್ನು ಸೃಷ್ಟಿಮಾಡುವದಿಲ್ಲ. ಹೀಗೆ ನಿತ್ಯವಾದ ಪದಾರ್ಥದ ನಿತ್ಯತ್ವವನ್ನು ನಿಯಮಿಸುವ ಹರಿಯ ಶಕ್ತಿ ನಿರರ್ಗಲ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಪರಮಾತ್ಮ ಪೂರ್ಣಾನಂದ.

**ಜ್ಞಾನಮೂರ್ತಯೇ ನಿತ್ಯಾಯ ನಮಃ –**

'ದೇಹವಿಲ್ಲದ ದೇವರು ಜಗವನ್ನು ಹೇಗೆ ಹೊತ್ತಾನು' ಎಂಬ ಸಂಶಯವೂ ಸಲ್ಲದು. ನಮ್ಮಂತೆ ಅವನದ್ದು ಪ್ರಾಕೃತದೇಹವಲ್ಲ. ಜ್ಞಾನಾನಂದಾದ್ಯಾತ್ಮಕವಾದದ್ದು. ಅಳಿವಿಲ್ಲದ ದೇಹವದು. ಹೀಗಾಗಿ ಎಂದೆಂದಿಗೂ ಶ್ರೀಹರಿಯೇ ಜಗದ್ಧಾರಕ ಎಂಬುದು ಗಮನಾರ್ಹ.

ಇನಿತು ಉಪನಿಷತ್ಪ್ರತಿಪಾದ್ಯನಾದ ಯಜ್ಞನನ್ನು ತುತಿಸಿದ ಆಚಾರ್ಯರು ಗುರುಗಳಿಗೂ ನಮಸ್ಕರಿಸಬೇಕೆಂದು ಶಿಷ್ಯರಿಗೆ ಶಿಕ್ಷಣ ನೀಡುತ್ತಿದ್ದಾರೆ. ಆಚಾರ್ಯರಿಗೆ ಅಚ್ಯುತಪ್ರೇಕ್ಷಾಚಾರ್ಯರು ಗುರುಗಳಾಗಿದ್ದರೂ ಅವರು ನಿಮಿತ್ತ ಮಾತ್ರ. ಅವರಿಂದ ಕಲಿಯಬೇಕಾದುದು ಆಚಾರ್ಯರಿಗೇನೂ ಇಲ್ಲ. ಹೀಗಾಗಿ ಅವರಿಗೆ ಎಲ್ಲಿಯೂ ಗ್ರಂಥಗಳಲ್ಲಿ ನಮಸ್ಕಾರ ಸಲ್ಲಿಸದಿದ್ದುದು ಮತ್ತು ಗುರುತ್ವೇನ ಶ್ರೀಹರಿಯನ್ನೇ ನಮಿಸಿದ್ದು ಇವರ ಶುದ್ಧಭಾಗವತ ಧರ್ಮವನ್ನು ಎತ್ತಿ ತೋರಿಸುತ್ತದೆ.

**ಶ್ರೀಬ್ರಹ್ಮರುದ್ರಾದಿಸಕಲದೇವತೆಗಳಿಗೂ ಜ್ಞಾನದ ಸೆಲೆ ಪರಮಾತ್ಮ–**

ಯಸ್ಮಾದ್ಬ್ರಹ್ಮೇಂದ್ರರುದ್ರಾದಿದೇವತಾನಾಂ ಶ್ರಿಯೋಽಪಿ ಚ ।
ಜ್ಞಾನಸ್ಫೂರ್ತಿಸ್ಸದಾ ತಸ್ಮೈ ಹರಯೇ ಗುರವೇ ನಮಃ ॥

ರುದ್ರಾದಿದೇವತೆಗಳು ಭಗವಂತನಿಂದ ಜ್ಞಾನವನ್ನು ಪಡೆಯುತ್ತಾರೆ ಎಂಬ ವಿಚಾರದಲ್ಲಿ ವಿವಾದವಿಲ್ಲ. ವಾಯುದೇವರ ವಿಚಾರಕ್ಕೆ ಬಂದಾಗ ಅನೇಕ ಸಮಸ್ಯೆಗಳು ಎದುರಾಗುತ್ತವೆ. 'ಯುಗಪತ್ಸ್ವಭುಜೌ ಯದ್ವತ್' ಎಂಬ ಪ್ರಮಾಣಕ್ಕನುಗುಣವಾಗಿ ಸರ್ವವೇದೋಕ್ತ ಗುಣಗಳೂ ಬ್ರಹ್ಮದೇವರಿಗೆ, ವಾಯುದೇವರಿಗೆ ಏಕಕಾಲದಲ್ಲಿ ಸಾಕ್ಷಾತ್ಕಾರವಾಗುತ್ತವೆ. ಹಾಗಾದರೆ ಅವರ ವಿಷಯದಲ್ಲಿ ಜ್ಞಾನದ ಉತ್ಪತ್ತಿಯಾಗುವದು ಸಾಧ್ಯವಿಲ್ಲ. ಎಂತಲೇ

ನಮಗೆ ತೋರುತ್ತದೆ. ಆದರೆ 'ಕ್ರಮೇಣ ವರ್ಧಮಾನಂ' 'ಜ್ಞಾನಭಕ್ತೀ ಹರೇಸ್ಸೃಷ್ಟಿಂ ವಿನಾ' ಎಂಬ ಪ್ರಮಾಣಗಳನ್ನು ಗಮನಿಸಿದಾಗ ಬ್ರಹ್ಮದೇವರಿಗೂ ಜ್ಞಾನದ ಉತ್ಪತ್ತಿ ಇದೆ ಎಂದು ತಿಳಿದುಬರುತ್ತದೆ. ಸಾಂಪ್ರಾದಾಯಿಕವಾಗಿ ತಿಳಿದು ಬಂದ ಈ ವಿಷಯವನ್ನು ಶ್ರೀನಿವಾಸತೀರ್ಥರು ಹೀಗೆ ವಿವರಿಸುತ್ತಾರೆ.

ಪುರಾಣ, ವೇದ, ಭಾರತೋಕ್ತವಾದ ಸಕಲಗುಣಗಳ ಸಾಕ್ಷಾತ್ಕಾರ ಬ್ರಹ್ಮದೇವರಿಗೆ ಯಾವಾಗಲೂ ಇದೆ. ಇದು ನಿರ್ವಿವಾದ. ಆದರೂ ಯಾವಾಗ ಲಕ್ಷ್ಮೀದೇವಿ ವೇದಾದ್ಯನುಕ್ತವಾದ ಸ್ವೋಪಾಸ್ಯವಾದ ಭಗವಂತನ ಗುಣಗಳನ್ನು ಉಪದೇಶಮಾಡುತ್ತಾಳೋ ಆವಾಗ ಅಪ್ರಾಪ್ತವಾದ ಜ್ಞಾನ ಬ್ರಹ್ಮದೇವರಿಗೆ ಉತ್ಪತ್ತಿಯಾಗುತ್ತದೆ.

ಇದಲ್ಲದೇ ಸ್ವಯಂ ಪರಮಾತ್ಮನೇ ವೇದಾನುಕ್ತವಾದ ಸ್ವಾನುಭವೈಕವೇದ್ಯವಾದ ತನ್ನ ಗುಣಗಳನ್ನು ಯಾವಾಗ ಉಪದೇಶ ಮಾಡುವನೋ ಆವಾಗಲೂ ಬ್ರಹ್ಮದೇವರಿಗೆ ಅಪ್ರಾಪ್ತವಾದ ಅಂದರೆ ಹಿಂದೆ ತಿಳಿಯದಿರುವ ಭಗವದ್ಗುಣಗಳ ಜ್ಞಾನದ ಉತ್ಪತ್ತಿಯಾಗುತ್ತದೆ. ಆದರೆ ಈ ಗುಣಗಳ ಸಾಕ್ಷಾತ್ಕಾರ ಬ್ರಹ್ಮದೇವರಿಗೆ ಆಗುವದಿಲ್ಲ.

ಹೇಗೆಂದರೆ ಚತುರ್ಗುಣೋಪಾಸ್ತಿಯೋಗ್ಯರಾದವರಿಗೆ ಆ ನಾಲ್ಕು ಗುಣಗಳು ಮಾತ್ರ ಸಾಕ್ಷಾತ್ಕಾರವಾಗುತ್ತವೆ. ತದತಿರಿಕ್ತವಾದ ಗುಣಗಳ ಪರೋಕ್ಷಜ್ಞಾನಮಾತ್ರವಿರುತ್ತದೆ. ಅವುಗಳ ಅಪರೋಕ್ಷವಾಗುವದಿಲ್ಲ. ಆದರಂತೆ ಬ್ರಹ್ಮದೇವರಿಗೂ ಹೆಚ್ಚಿನ ಗುಣಗಳ ಜ್ಞಾನವಾದರೂ ಅವುಗಳ ಸಾಕ್ಷಾತ್ಕಾರವಾಗುವದಿಲ್ಲ. ಮುಕ್ತಿಯಾಗುವವರೆಗೂ ಈ ಜ್ಞಾನ ಬೆಳೆಯುತ್ತ ಹೋಗುತ್ತದೆ. ಮುಕ್ತಿ ಪಡೆದ ಮೇಲೆ ವೃದ್ಧ್ಯಾದಿಶೂನ್ಯವಾಗುತ್ತದೆ.

ಹೀಗೆ ಬ್ರಹ್ಮದೇವರಿಗೆ ಅಪ್ರಾಪ್ತವಾದ ಜ್ಞಾನದ ಪ್ರಾಪ್ತಿ ಭಗವಂತನಿಂದ ಆಗುತ್ತದೆ. ಅಂದಮೇಲೆ ರುದ್ರಾದಿದೇವತೆಗಳಿಗೆ ಅಪ್ರಾಪ್ತವಾದ ಜ್ಞಾನದ ಪ್ರಾಪ್ತಿ ಭಗವಂತನಿಂದ ಆಗುತ್ತದೆಂಬುದು ಕೈಮುತ್ಯಸಿದ್ಧ.

ನಿತ್ಯಮುಕ್ತಳಾದ ರಮಾದೇವಿಗೆ ಜ್ಞಾನದ ಉತ್ಪತ್ತಿ ಇಲ್ಲ. ಜ್ಞಾನ ಸದಾ ಅವಳಿಗೆ ಇದ್ದೇ ಇದೆ. ಆದರೆ ಅದು ಇರುವದು ಭಗವಂತನ ಅನುಗ್ರಹದಿಂದಲೇ ಹೊರತು ಸ್ವಭಾವಬಲದಿಂದಲ್ಲ.

ಎಂದಮೇಲೆ ಶ್ರೀಹರಿ ರಮಾಬ್ರಹ್ಮಾದಿಗಳ ಜ್ಞಾನದ ಸೆಲೆ ಎಂಬುದು ನಿರ್ವಿವಾದ.

## ಋಷ್ಯಾದಿವಿಚಾರ

ವೇದಮಂತ್ರಗಳನ್ನು ವಿನಿಯೋಗಿಸುವಾಗ ಋಷಿ, ದೇವತಾ, ಛಂದಸ್ಸುಗಳನ್ನು ತಿಳಿದಿರಬೇಕು. ಎಲ್ಲದಕ್ಕೂ ಮುಖ್ಯವಾಗಿ ಅರ್ಥಜ್ಞಾನವನ್ನು ಮಾಡಿಕೊಳ್ಳಬೇಕು. ಆವಾಗಲೇ

ಮಂತ್ರಗಳಿಂದ ಎಲ್ಲ ತರಹದ ಪ್ರಯೋಜನಗಳು ಸಿದ್ಧಿಸುತ್ತವೆ. ಅನ್ಯಥಾ ಅನರ್ಥ ತಪ್ಪಿದ್ದಲ್ಲ. ಹೀಗೆಂದು ಸಾಮವೇದದ ಆರ್ಷೇಯಬ್ರಾಹ್ಮಣ ತಿಳಿಸುತ್ತದೆ. ಇವುಗಳಲ್ಲಿ ಮಂತ್ರಗಳ ಜ್ಞಾನವಂತೂ ವ್ಯಾಖ್ಯಾನದಿಂದಲೇ ಆಗುತ್ತದೆ. ಛಂದಸ್ಸಿನ ಜ್ಞಾನ ಅಕ್ಷರಗಳ ಗಣನೆಯಿಂದ ಸುಕರ. ಈ ಉಪನಿಷತ್ತಿನಲ್ಲಿ ಒಟ್ಟು ಹದಿನೆಂಟು ಮಂತ್ರಗಳಿವೆ. ಇವುಗಳಲ್ಲಿ ೧, ೨, ೩, ೫, ೬, ೭. ೯, ೧೦, ೧೧, ೧೨, ೧೩, ೧೪, ೧೫ ಅನುಷ್ಟುಪ್ ಛಂದಸ್ಸಿನವು. ನಾಲ್ಕನೆಯ ಮಂತ್ರ ತ್ರಿಷ್ಟುಪ್ ಛಂದಸ್ಸಿಗೆ ಸಂಬಂಧಿಸಿದ್ದು. ಎಂಟನೆಯ ಮಂತ್ರ ಜಗತೀ ಛಂದಸ್ಸಿಗೆ ಸೇರಿದ್ದು. ೧೬, ೧೭ನೆಯ ಮಂತ್ರಗಳು ಗದ್ಯರೂಪವಾಗಿವೆ. ಹದಿನೆಂಟನೆಯ ಮಂತ್ರ ತ್ರಿಷ್ಟುಪ್ ಛಂದಸ್ಸಿಗೆ ಸೇರಿದ್ದೆಂದು ತಿಳಿಯಬೇಕು.

ಈ ಉಪನಿಷತ್ತಿನ ಋಷಿದೇವತೆಗಳನ್ನು ತಿಳಿಸುವ ಗೋಜಿಗೆ ಯಾವ ಆಚಾರ್ಯರೂ ಹೋಗಿಲ್ಲ. ಇದನ್ನು ಮೊಟ್ಟಮೊದಲು ಪ್ರಮಾಣಪುರಸ್ಸರವಾಗಿ ತಿಳಿಸಿದವರು ಶ್ರೀಮನ್ಮಧ್ವಾಚಾರ್ಯರು.

ಸಂಹಿತೆಯ ಪ್ರಕಾರ ಇಲ್ಲಿಯ ಮೊದಲ ಹದಿನೇಳು ಮಂತ್ರಗಳಿಗೆ ದಧ್ಯಙಥರ್ವಣ ಋಷಿ. ಹದಿನೆಂಟನೆಯ ಕೊನೆಯ ಮಂತ್ರಕ್ಕೆ ಅಗಸ್ತ್ಯ ಋಷಿ. ಹಾಗೆಯೇ ಮೊದಲ ಹದಿನಾಲ್ಕು ಮಂತ್ರಗಳಿಗೆ ಆತ್ಮಾ ದೇವತೆ. ಹದಿನೈದನೆಯ ಮಂತ್ರಕ್ಕೆ ಪೂಷಾ, ಹದಿನಾರನೆಯ ಮಂತ್ರಕ್ಕೆ ಸೂರ್ಯ, ಹದಿನೇಳನೆಯ ಮಂತ್ರಕ್ಕೆ ವಾಯು, ಕ್ರತು ಮತ್ತು ಪರಮಾತ್ಮ ಶ್ರೀನಾರಾಯಣ, ಹದಿನೆಂಟನೆಯ ಮಂತ್ರಕ್ಕೆ ಅಗ್ನಿ ದೇವತೆಗಳೆಂದು ಹೇಳುತ್ತಾರೆ. ಹೀಗೆ ಅನೇಕದೇವತೆಗಳನ್ನು ಪ್ರತಿಪಾದಿಸುವ ದಧ್ಯಙಥರ್ವಣ ಮತ್ತು ಅಗಸ್ತ್ಯ ಋಷಿಗಳಿಗೆ ದೃಷ್ಟವಾದ ಮಂತ್ರಗಳ ಸಮುದಾಯವೇ ಈಶಾವಾಸ್ಯೋಪನಿಷತ್ತು ಎಂದು ಎಲ್ಲರೂ ಹೇಳುತ್ತಾರೆ.

ಇರಬಹುದು. ಒಂದು ಮಂತ್ರಕ್ಕೆ ಒಬ್ಬನೇ ಋಷಿ, ಒಬ್ಬನೇ ದೇವತೆ ಇರಬೇಕೆಂದು ಆಚಾರ್ಯರ ಹಠವಲ್ಲ. ಅನುಕ್ರಮಣಿಕಾದಲ್ಲಿಯೂ ಸಾಕಷ್ಟು ಸ್ಖಾಲಿತ್ಯಗಳಿವೆ. ಹೀಗಾಗಿ ಪ್ರಮಾಣವಿಲ್ಲದೇ ನಂಬುವದು ಕಷ್ಟ. ಆದಕ್ಕಾಗಿ ಪ್ರಮಾಣ ಹೇಳಿದ್ದನ್ನು ಹಾಗೂ ಉಪನಿಷತ್ತಿನ ಪ್ರಧಾನ ಋಷಿದೇವತೆಗಳನ್ನು ಮೊದಲು ತಿಳಿದಿರಲೇಬೇಕೆಂಬ ಭಾವದಿಂದ ಋಷಿದೇವತೆಗಳ ವಿಚಾರವನ್ನು ಬ್ರಹ್ಮಾಂಡ,ಭಾಗವತಪ್ರಮಾಣಗಳ ಮೂಲಕ ಆಚಾರ್ಯರು ಮಂಡಿಸಿದ್ದಾರೆ. ಇದನ್ನು ಕೂಡಾ ಕಂಚೀ ರಘುನಾಥಾಚಾರ್ಯರು ಋಗ್ಭಾಷ್ಯದ ಪ್ರಮಾಣವನ್ನು ನೀಡುವುದರ ಮುಖಾಂತರ ನಿರೂಪಿಸಿದ್ದಾರೆ.

ಅಥವಾ ದಧ್ಯಙಥರ್ವಣರು, ಅಗಸ್ತ್ಯರು ಈ ಉಪನಿಷತ್ತನ್ನು ಬಿಡಿಬಿಡಿಯಾಗಿ ಕಂಡರೂ ಸ್ವಾಯಂಭುವ ಮನುಗಳು ಸಮಗ್ರವಾಗಿ ಇದನ್ನು ಕಂಡಿದ್ದಾರೆ. ಅಲ್ಲದೆ ಸಮಗ್ರ ಹರಿಪರವಾಗಿ ಕಂಡಿದ್ದಾರೆ. ಹೀಗಾಗಿ ಈ ಉಪನಿಷತ್ತನ್ನು ಕಂಡ ಅವಾಂತರ ಋಷಿಗಳಲ್ಲಿ ಪ್ರಧಾನರಾದವರು

ಸ್ವಾಯಂಭುವಮನುಗಳೆಂದು ತಿಳಿಯುವದು ಸೂಕ್ತವಾಗಿದೆ. ಇವರ ತರುವಾಯ ದಧ್ಯಙಥರ್ವಣ, ಅಗಸ್ತ್ಯಋಷಿಗಳು ಇದನ್ನು ಕಂಡಿರಬಹುದು. ಇನ್ನು ಇದಕ್ಕೆ ಪ್ರಧಾನ ದೇವತೆ ಯಜ್ಞನಾಮಕ ಭಗವಂತ ಎಂಬುದು ಗಮನಾರ್ಹ. ಇದನ್ನರುಹುವ ಪ್ರಮಾಣಗಳು ಹೀಗಿವೆ.

ಸ್ವಾಯಂಭುವಃ ಸ್ವದೌಹಿತ್ರಂ ವಿಷ್ಣುಂ ಯಜ್ಞಾಭಿಧಂ ಮನುಃ ।
ಈಶಾವಾಸ್ಯಾದಿಭಿರ್ಮಂತ್ರೈಸ್ತುಷ್ಟಾವಾವಹಿತಾತ್ಮನಾ ॥ ಬ್ರಹ್ಮಾಂಡ ॥

ಭಾಗವತದ ಅಷ್ಟಮಸ್ಕಂಧದ ಮೊದಲ ಅಧ್ಯಾಯವು ಈ ವಿಷಯವನ್ನು ಪ್ರತಿಪಾದಿಸುತ್ತದೆ.

ಸ್ವಾಯಂಭುವ ಮನು ಹದಿನಾಲ್ಕು ಮನುಗಳಲ್ಲಿ ಹಿರಿಯ. ಅವನಿಗೆ ಪ್ರಿಯವ್ರತ, ಉತ್ತಾನಪಾದ ಎಂದು ಇಬ್ಬರು ಮಕ್ಕಳು. ಆಕೂತಿ, ದೇವಹೂತಿ, ಪ್ರಸೂತಿ ಎಂದು ಮೂರುಜನ ಹೆಣ್ಣುಮಕ್ಕಳು ಇದ್ದರು. ಆಕೂತಿಯನ್ನು ರುಚಿಪ್ರಜಾಪತಿಗೆ, ದೇವಹೂತಿಯನ್ನು ಕರ್ದಮಪ್ರಜಾಪತಿಗೆ, ಪ್ರಸೂತಿಯನ್ನು ದಕ್ಷಪ್ರಜಾಪತಿಗೆ ಧಾರೆ ಎರೆದು ಕೊಟ್ಟ. ರುಚಿಯಿಂದ ಆಕೂತಿಯಲ್ಲಿ ಜನಿಸಿದವನೇ ಯಜ್ಞ. ದೌಹಿತ್ರ ವಿಷ್ಣುವೆಂಬುದನ್ನರಿತು ತನ್ನ ಮಗನನ್ನಾಗಿಸಿ ಕೊಂಡ. ಪ್ರಜೋತ್ಪತ್ತಿಯ ಕಾರ್ಯವನ್ನು, ದೇಶರಕ್ಷಣೆಯ ಜವಾಬ್ದಾರಿಯನ್ನು ಸಮರ್ಥವಾಗಿ ಸಾಧಿಸಿ ವಿರಕ್ತನಾಗಿ ಮಕ್ಕಳಿಗೆ ರಾಜ್ಯವನ್ನೊಪ್ಪಿಸಿ ಪತಿವ್ರತೆಯಾದ ಶತರೂಪಾದೇವಿಯೊಡನೆ ತಪಸ್ಸಿಗೆಂದು ವನಕ್ಕೆ ತೆರಳಿದ.

ತನಗೂ ತನ್ನಂತಹಾ ಸಾಧಕರಿಗೂ ಮೋಕ್ಷವಾಗಲೆಂಬ ಬಯಕೆಯಿಂದ ಈ ಮಂತ್ರಗಳಿಂದ ಯಜ್ಞನಾಮಕ ಭಗವಂತನನ್ನು ತುತಿಸಲು ಪ್ರಾರಂಭಿಸಿದ. ಈ ಪ್ರಸಂಗದಲ್ಲಿ ಹರಿಯ ಸ್ತುತಿಯನ್ನು ಕೇಳಿ ಅದನ್ನು ಸಹಿಸದೇ ಕ್ರುದ್ಧರಾದ ದೈತ್ಯರು ಮನುವನ್ನು ತಿನ್ನಲು ಹಾಗೆ ಅವನನ್ನು ನಾಶಮಾಡಲು ಮುಂದಾದರು. ಎಲ್ಲೆಡೆಯೂ ವಾಸವಾಗಿಹ ಈಶ ಯಜ್ಞ ಇದನ್ನು ಕಂಡ. ಅನನ್ಯವಾಗಿ ತನ್ನನ್ನೇ ಚಿಂತಿಸುತ್ತಿರುವ ಈ ಭಕ್ತನ ಯೋಗಕ್ಷೇಮ ನೋಡಿಕೊಳ್ಳಲೆಂದು ಧಾವಿಸಿ ಬಂದ. ದೈತ್ಯರನ್ನು ಸಂಹರಿಸಿ ಮನುವನ್ನು ಕಾಪಾಡಿದ.

ಹೀಗೆ ಮೋಕ್ಷಕ್ಕಾಗಿ ತುತಿಸುವವರಿಗೆ ಮೋಕ್ಷಮಾತ್ರವಲ್ಲದೆ ಅವಾಂತರ ಪ್ರಯೋಜನಗಳೂ ಅವರಿಗೆ ಸಿದ್ಧಿಸುತ್ತವೆಂದು ಈ ಬಗೆಯ ಪ್ರಸಂಗದಿಂದ ನಮಗೆ ತಿಳಿದು ಬರುತ್ತದೆ.

ಇಲ್ಲಿ ಈಶಾವಾಸ್ಯಾದಿ ಮಂತ್ರಗಳಿಂದ ತುತಿಸಿದವ ಸ್ವಾಯಂಭುವ ಮನು. ಸ್ತುತಿಸಿಕೊಂಡವ ಯಜ್ಞ. ಹೀಗಾಗಿ ಇವರೇ ಋಷಿ ಹಾಗು ದೇವತೆಗಳು. ಮೋಕ್ಷ ಪ್ರಧಾನ ಪ್ರಯೋಜನ. ರಕ್ಷೋನಿರಸನ ಅವಾಂತರ ಪ್ರಯೋಜನವೆಂದು ತಿಳಿದುಬರುತ್ತದೆ.

**ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।**
**ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯ ಸ್ವಿದ್ಧನಮ್ ॥ 1 ॥**

ಈ ಪ್ರಪಂಚವೆಲ್ಲ ನಾಮರೂಪಾತ್ಮಕವಾಗಿದೆ. ಸತ್ಯವಾಗಿದೆ. ಇದು ಮಿಥ್ಯೆಯಲ್ಲ, ಕಲ್ಪನಾವಿಲಾಸವಲ್ಲ . ಮಾಯಾವಿಯ ಮಾಯೆಯಿಂದ ತೋರುವದಲ್ಲವಿದು. ಈಶನಾದ ಅಂದರೆ ಸರ್ವಸಮರ್ಥನಾದ ಶ್ರೀಹರಿ ನಿರ್ಮಾಣಮಾಡಿದ ಜಗತ್ತು ಇದು. ಸ್ವತಃ ಪ್ರವೃತ್ತಿ ಇದಕ್ಕಿಲ್ಲ . ಸರ್ವಾತ್ಮನಾ ಪರತಂತ್ರವಿದು. ಪರಾತ್ಪರನಾದ ಪರಮಾತ್ಮನ ಅಧೀನವಾಗಿದೆ. ಭಗವಂತನ ಜ್ಞಾನವಾದಮೇಲೆ ಇದನ್ನು ತೊರೆದು ನಾವು ಹರಿಯ ಸನಿಹ ಸೇರಬಹುದು. ಆದರೆ ಯಾರ ಅರಿವಿನಿಂದಲೂ ಇದು ಸುಳ್ಳಾಗುವದಿಲ್ಲ. ಇದೆಲ್ಲವೂ ದೇವರ ಸಿರಿ. ಆತನ ಸಂಪತ್ತು . ಹೀಗಾಗಿ ಧನಮದಾಂಧರಾದ ರಾಜರ ಹಂಗಿನಲ್ಲಿ ಬದುಕಬಾರದು. ಅವರಿಗೆ ಅಂಗಲಾಚಬಾರದು. ಅವರ ಒಡೆತನದಲ್ಲಿ ಇಲ್ಲದಿರುವ ದುಡ್ಡನ್ನು ನಾವು ಬೇಡಬಾರದು. ಹೀಗಾಗಿ ಬೇಡಿದರೆ ಜಗದೊಡೆಯನನ್ನೇ ಬೇಡಬೇಕು. ಒಡೆಯಗೆ ಒಡಲನ್ನು ತೋರಬೇಕು. ಧರ್ಮಕ್ಕೆ ವಿರುದ್ಧವಾಗದೆ ಇದ್ದುದನ್ನು, ಯಾದೃಚ್ಛಿಕವಾಗಿ ಬಂದದ್ದನ್ನು ಅನುಭವಿಸಬೇಕು. ಇದೇ ಬಹು ಎಂದು ಭಾವಿಸಬೇಕು. ಅಲಂಬುದ್ಧಿಯನ್ನು ಆಳವಡಿಸಿಕೊಳ್ಳಬೇಕು. ಇಂಥವನೆ ತತ್ತ್ವವನ್ನು ತಿಳಿಯಲು ಪಾತ್ರ. ಹದವಾದ ಪಾತ್ರ ಇವನು ಮಾತ್ರ. ಇದು ಮನುವಿನ ಮೊದಲ ಸಂದೇಶ.

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ।**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥ 2 ॥**

ಎಲ್ಲವನ್ನೂ ಇಲ್ಲವೆಂದು ಹಳಿದು ಕರ್ಮಗಳನ್ನೆಲ್ಲ ತೊರೆದು ಬ್ರಹ್ಮನೊಬ್ಬನೇ ಸತ್ಯವೆಂದರಿಯುತ್ತಿರುವದು ಉನ್ನತಮಟ್ಟ. ಈ ಮಟ್ಟವನ್ನು ಮುಟ್ಟಲಾಗದವರು ಕರ್ಮಗಳನ್ನು ಮಾಡುತ್ತಲೇ ಕಾಲ ಕಳೆಯಬೇಕು. ಇವರು ಅಜ್ಞಾನಿಗಳು. ಉಸಿರೆಳೆವವರೆಗೂ ಕರ್ಮಗಳನ್ನು ಮಾಡುತ್ತಿರುವದು ಇವರಿಗೆ ಅನಿವಾರ್ಯ. ಹೀಗೆಂದು ಅದ್ವೈತಿಗಳ ಅಭಿಪ್ರಾಯ. ಅಭಿಜಾತರಿಗೆ ಅಭಿಮತವಲ್ಲದ ಅಭಿಪ್ರಾಯವಿದು.

ಜ್ಞಾನಿಗಳಾದ ಪಾಂಡವರು, ಶುಕವಾಮದೇವಾದಿಗಳು ಕೂಡಾ ಕರ್ಮದ ನಂಟನ್ನು ಅಂಟಿಸಿಕೊಂಡಿದ್ದಾರೆ. ಆದ್ದರಿಂದ ಅಜ್ಞಾನಿಗಳಿಗೆ ಮಾತ್ರ ಅನಿವಾರ್ಯವೆಂಬುದು ತರವಲ್ಲ. ಜ್ಞಾನಿಯಾದರೂ ಅಜ್ಞಾನಿಯಾದರೂ ಕರ್ಮಗಳಿಗೆ ಅಂಟಿಕೊಂಡೇ ಇರಬೇಕು. ಹೀಗೆಂದು ಕಂಡದ್ದನ್ನೆಲ್ಲ ಮಾಡಬಾರದು. ತನಗೆ ವಿಹಿತವಾದವುಗಳನ್ನು ಮಾತ್ರ ಆಚರಿಸಬೇಕು. ನಾನು ಮಾಡಿದ್ದಲ್ಲ, ನೀನೇ ಎನ್ನೊಳು ನಿಂತು ಮಾಡಿ ಮಾಡಿಸುವಿ. ನಿನ್ನಯ ದಯದಿ ಇನಿತು ಮಾಡಿದ ಸುಕೃತ ನಿನ್ನ ಪೂಜೆ ಎಂದು ಭಾವಿಸುತ್ತಿರಬೇಕು. ನಿನ್ನ ಭಕುತಿಯು ಬೇಕು. ನೀನೇ ಎನಗೆ ಬೇಕು. ಪುನಃ ಪುನಃ ನಿನ್ನಯ ಪ್ರಸಾದವೇ ಎನಗಾಗಬೇಕೆಂದು ಕರ್ಮಗಳನ್ನು ಮಾಡಿ

ಹರಿಗೆ ಸಮರ್ಪಿಸಬೇಕು. ಈ ಬಗೆಯ ಹರಿಪೂಜಾತ್ಮಕವಾದ ಕರ್ಮಗಳನ್ನು ಮಾಡದಿದ್ದರೆ ಅಪರೋಕ್ಷಿಗಳಿಗೂ ಆನಂದಹ್ರಾಸ ತಪ್ಪಿದ್ದಲ್ಲ. ಮಾಡಿದರೆ ಆನಂದದ ಅಭಿವೃದ್ಧಿಯಾಗುತ್ತದೆ. ಇಂತಹ ಕರ್ಮಗಳನ್ನು ಮಾಡುತ್ತಿರುವ ಅಜ್ಞಾನಿಯಾದ ಮನುಜನಿಗೆ ಕರ್ಮಜಾಲದ ಜಂಜಾಟವಿಲ್ಲ. ಅಲ್ಲದೆ ಅವನಿಗೆ ಅಪರೋಕ್ಷಜ್ಞಾನ ದೊರಕಿಸಿ ಕೊಡಲು ಸಹಕಾರಿಯಾಗುತ್ತದೆ. ಆದ್ದರಿಂದ ಲಿಂಗಭಂಗವಾಗುವವರೆಗೂ ಕರ್ಮದ ನೆಂಟಸ್ತಿಕೆಯನ್ನು ಕಳೆದು ಕೊಳ್ಳುವದು ಯಾರಿಗೂ ಶೋಭಿಸುವದಿಲ್ಲ. ಹಲವು ಶ್ರುತಿಸ್ಮೃತಿಗಳು ಕರ್ಮವನ್ನು ತೊರೆಯಬೇಕೆಂದು ಉಪದೇಶನೀಡುತ್ತವೆ. ಆ ಉಪದೇಶ ಕಾಮ್ಯ, ನಿಷಿದ್ಧಕರ್ಮವಿಷಯಕ. ಹೊರತು ವಿಹಿತವಿಷಯಕವಲ್ಲ.

ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾವೃತಾಃ ।
ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ ॥ 3 ॥

ಪರಮಾತ್ಮ ತತ್ತ್ವವನ್ನು ತಿಳಿಸಹೊರಟಿದೆ ಈ ಉಪನಿಷತ್. ಆದ್ದರಿಂದ ತತ್ತ್ವವನ್ನು ಮಾತ್ರ ಪ್ರತಿಪಾದಿಸಬೇಕು. ತತ್ತ್ವವನ್ನು ತಪ್ಪಾಗಿ ತಿಳಿದವರನ್ನು ತಿರಸ್ಕರಿಸುವದು ತರವಲ್ಲ. ಅತಾತ್ತ್ವಿಕರನ್ನು ನಿಂದಿಸುವದು ತತ್ತ್ವಪ್ರತಿಪಾದನರೂಪವೂ ಅಲ್ಲ. ಅದರಿಂದ ಯಾವ ಉಪಯೋಗವೂ ಇಲ್ಲ ಎಂದು ತೋರಬಹುದು. ಆದರೇ ಉಪದೇಶದ ಹಿನ್ನೆಲೆ ಪರಾರ್ಥ. ಮತ್ತೊಬ್ಬರು ತತ್ತ್ವವನ್ನು ತಿಳಿಯಲಿ ಎಂಬ ಉದ್ದೇಶಕ್ಕಾಗಿಯೇ ಉಪದೇಶವಿರುತ್ತದೆ. ಹಾಗೆಂದು ಕಂಡವರಿಗೆಲ್ಲ ಉಪದೇಶ ನೀಡುವದು ದೋಷಕರ. ತಿಳಿಯುವ ತವಕ ಇದ್ದವರಿಗೆ ಮಾತ್ರ ತಿಳಿಸಿ ಹೇಳಬೇಕು. ಹಲವು ಬಾರಿ ಸಜ್ಜನರಲ್ಲಿ ಈ ತವಕವನ್ನು ಬಡಿದೆಬ್ಬಿಸಬೇಕಾಗುತ್ತದೆ. ತತ್ತ್ವವನ್ನರಿಯದವರನ್ನು ಹಳಿಯುವದರಿಂದ ಈ ತವಕ ಜಾಗರೂಕವಾಗುತ್ತದೆ. ಅದಾಗಿ ಸಜ್ಜನರಲ್ಲಿ ಬುಭುತ್ಸಾವನ್ನು ತುಂಬುವದೇ ಈ ಮಂತ್ರದ ಮೂಲ ಉದ್ದೇಶ.

ಈ ಮಂತ್ರದಲ್ಲಿ ಒಂದು ಪಾಠಭೇದ ಶಿವಪೂಜೆಯಲ್ಲಿ ಕರಡಿಯ ಹಾಗೆ ತೊಡಕು ತಂದೊಡ್ಡುತ್ತದೆ.

'ಅಸೂರ್ಯಾಃ' ಎಂಬ ಪಾಠಾಂತರ ಹಲವು ಪುಸ್ತಕಗಳಲ್ಲಿ ಕಾಣಸಿಗುತ್ತದೆ. ಪ್ರಕಾಶಭಾಷ್ಯಕಾರರು ಈ ಪಾಠವನ್ನು ಅಂಗೀಕರಿಸಿದ್ದಾರೆ. ಸೂರ್ಯನಿಲ್ಲದ ಲೋಕಗಳೆಂದು ಈ ಶಬ್ದಕ್ಕೆ ಅನುವಾದ ಮಾಡಿದ್ದಾರೆ. ಅಸುರ್ಯಾಃ ಎಂಬ ಪಾಠವನ್ನವಲಂಬಿಸಿದರೂ ವರ್ಣವಿಪರ್ಯಯದಿಂದ (ಸು ಎಂಬ ಹ್ರಸ್ವವನ್ನು ಸೂ ಎಂಬುದಾಗಿ ಬದಲಿಸಿಕೊಂಡು) ಸೂರ್ಯಪ್ರಕಾಶಹೀನ ಎಂಬ ಅರ್ಥವನ್ನು ಹಲವರು ಮಾಡುತ್ತಾರೆ. ಆದರೆ -

ಮಹಾದುಃಖೈಕಹೇತುತ್ವಾತ್ ಪ್ರಾಪ್ಯತ್ವಾದಸುರೈಸ್ತಥಾ ।
ಅಸುರ್ಯಾ ನಾಮ ತೇ ಲೋಕಾಸ್ತಾನ್ಯಾಂತಿ ವಿಮುಖಾ ಹರೌ ॥

ಎಂಬ ನಾರದೀಯ ಪ್ರಮಾಣವಚನ ಅಸುರ್ಯ ಎಂಬ ಪದಕ್ಕೆ ಎರಡು ಅರ್ಥಗಳನ್ನು ತಿಳಿಹೇಳುತ್ತದೆ. ಸುರ ಎಂದರೆ ಸುಖ. ಅಸುರ ಎಂದರೆ ದುಃಖ. ಅದು ಬರೀ ದುಃಖವಲ್ಲ, ಮಹಾದುಃಖ. ಇಂತಹಾ ಮಹಾದುಃಖಗಳಿಗೆ ಕಾರಣವಾದದ್ದರಿಂದ ಆ ಲೋಕಗಳು ಅಸುರ್ಯಲೋಕಗಳು. ಅಥವಾ ಅಸುರರು ಹೊಂದುವ ಲೋಕಗಳು ಅಸುರ್ಯ ಲೋಕಗಳು. ಹರಿಪರಾಙ್ಮುಖರಾದವರು ಅಸುರರು. ಅವರೆಲ್ಲರೂ ಕೊನೆಗೆ ಈ ಲೋಕಗಳನ್ನು ಸೇರುತ್ತಾರೆ. ಮಹಾದುಃಖವನ್ನನುಭವಿಸುತ್ತಾರೆ. ಸೂರ್ಯಪ್ರಕಾಶಹೀನ ಎಂಬ ಅರ್ಥವನ್ನು ಹೇಳುವವರಿಗೆ ಈ ಪ್ರಮಾಣದ ವಿರೋಧ ಬರುತ್ತದೆ. ಇದಲ್ಲದೆ,

ಅನಂದಾ ನಾಮ ತೇ ಲೋಕಾ ಅಂಧೇನ ತಮಸಾವೃತಾಃ ।
ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಅವಿದ್ವಾಂಸೋ ಬುಧೋ ಜನಾಃ ॥ ಬೃ.ಆ ॥

ಎಂಬ ಬೃಹದಾರಣ್ಯದ ವಚನವಂತೂ ಸ್ಪಷ್ಟವಾಗಿ ಅಸುರ್ಯಾ ಎಂದರೇ ಅನಂದಾಃ ಎಂದು ಇದರ ಅರ್ಥವನ್ನು ತಿಳಿಸುತ್ತಾ ಆ ಪಾಠ ಅಪಪಾಠವೆಂಬುದನ್ನು ನಿರ್ಧಾರಮಾಡುತ್ತದೆ. ಜೊತೆಗೆ ಮುಂದಿನ ಪಾದದಲ್ಲಿಯ 'ಅಂಧೇನ ತಮಸಾವೃತಾಃ 'ಎಂಬ ವಚನದ ಪುನರುಕ್ತಿಯಂತೂ ಇದ್ದೇ ಇದೆ.

ಸುರ ಎಂದರೇ ದೇವರು ಬ್ರಹ್ಮ ಅವನು ಅದ್ವಿತೀಯ. ಬ್ರಹ್ಮನ ಹೊರತು ಬೇರೊಂದು ಯಾವುದೂ ಇಲ್ಲ. ಹೀಗಾಗಿ ದೇವತೆಗಳು ಮೊದಲಾದವರೆಲ್ಲರೂ ಅಸುರರೇ. ಅವರಿಗೆ ಸೇರಿದ ಲೋಕಗಳು ಅಸುರ್ಯಲೋಕಗಳು. ಆತ್ಮಹತ್ಯೆ ಮಾಡಿದವರು ಅಂದರೆ ಆತ್ಮೈಕ್ಯಜ್ಞಾನವನ್ನು ಪಡೆಯದಿದ್ದವರು ಈ ದೇವತಾದಿಲೋಕಗಳನ್ನು ಪಡೆಯುತ್ತಾರೆ. ಅದರಲ್ಲಿಯೂ ಆತ್ಮೈಕ್ಯೋಪಾಸನಾಗಳಿಂದ ಮಿಶ್ರಿತವಾದ ಕರ್ಮಗಳಿಂದ ಬ್ರಹ್ಮಾದಿಲೋಕಗಳು, ಉಪಾಸನಾರಹಿತಕರ್ಮಗಳಿಂದ ಪಿತೃಲೋಕಗಳೂ, ಅಧರ್ಮಮಿಶ್ರಿತವಾದ ಕರ್ಮಗಳಿಂದ ಮನುಷ್ಯಜನ್ಮದ ಮೊದಲು ಸ್ಥಾವರಜನ್ಮಗಳು ಫಲವಾಗಿ ದೊರೆಯುತ್ತವೆಂದು ಆದ್ದರಿಂದ ಬ್ರಹ್ಮಾದಿಸ್ಥಾವರಾಂತ ಲೋಕಗಳೆಲ್ಲವೂ ಆತ್ಮಹನನದ ಫಲವೆಂತಲೂ ಇವುಗಳನ್ನು ಪರಿಹರಿಸಿಕೊಳ್ಳಬೇಕಾದರೆ ಆತ್ಮೈಕ್ಯಜ್ಞಾನ ಆವಶ್ಯಕವೆಂತಲೂ ಅದ್ವೈತಿಗಳ ನಿಲುವು. ಇವೆಲ್ಲ ವಿಭ್ರಮವಿಲಾಸಗಳೇ ಹೊರತು ಪ್ರಮಾಣ ಒಂದೂ ಇದಕ್ಕಿಲ್ಲ.

ವಿಶುದ್ಧವಾದ ಮಂತ್ರದ ಭಾವವನ್ನು ತಿಳಿಸುವದಕ್ಕಾಗಿ ವಾಮನಪುರಾಣ ಈ ಮಂತ್ರಕ್ಕೆ ನೀಡಿದ ಅದ್ಭುತವಾದ ವ್ಯಾಖ್ಯಾನವನ್ನು ಆಚಾರ್ಯರು ಅನಾವರಣಗೊಳಿಸಿದ್ದಾರೆ. ಅದು ಹೀಗಿದೆ.

**ಸು** ಚೆನ್ನಾದ **ರ** ಸುಖ. ಚೆನ್ನಾದ ಸುಖ ಇದು ಸುರ್ಯ. ಆ ಸುಖ ಇರುವ ತಾಣಗಳು ಸುರ್ಯಲೋಕಗಳು. ಸುಖವಿರುದ್ಧವಾದ ಮಹಾದುಃಖ ಇರುವ ಲೋಕಗಳು ಅಸುರ್ಯ

ಲೋಕಗಳು. ಕತ್ತಲು ಕವಿದ ಗವಿಗಳು ಆ ಲೋಕಗಳು. ತುಸು ತೋಷವೂ ಇರದ ದೇಶಗಳು. ತಳಮಳ ತುಂಬಿ ತುಳುಕುವ ತಾಣಗಳು.

ಹರಿಯನ್ನು ನಿರ್ಗುಣನೆಂದು, ನಿರಾಕಾರನೆಂದು, ಸೀಮಿತಗುಣಗಳಿರುವವನೆಂದು ಮುಂತಾಗಿ ಹಳಿದವರು ಇವರೆಲ್ಲರೂ ಆತ್ಮಹನರೇ. ಇಂತಹ ಜನ ದೇವರು ನೀಡಿದ ಅವಕಾಶಗಳನ್ನೆಲ್ಲ ಕಡೆಗಾಣಿಸಿ ದುಃಖಮಯವಾದ ಈ ತಮೋಲೋಕಗಳಿಗೆ ಸೇರಿ ತಾವು ಆಚರಿಸಿದ ಅತಿತೀವ್ರವಾದ ಪಾಪಗಳ ಫಲವನ್ನನುಭವಿಸುತ್ತಾರೆ. ಇದು ಸತ್ಯ.

**ಅನೇಜದೇಕಂ ಮನಸೋ ಜವೀಯೋ ನೈನದ್ದೇವಾ ಆಪ್ನುವನ್ಪೂರ್ವಮರ್ಷತ್ ।**

**ತದ್ಧಾವತೋಽನ್ಯಾನತ್ಯೇತಿ ತಿಷ್ಠತ್ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥ 4 ॥**

ಪರಬ್ರಹ್ಮನ ಸ್ವರೂಪವನ್ನು ತಿಳಿಸುವ ಮಂತ್ರವಿದು. ಈ ಮಂತ್ರದಲ್ಲಿ 'ಅನೇಜತ್= ನಿಷ್ಕ್ರಿಯ, ಮನಸೋಜವೀಯಃ=ಮನಸ್ಸಿಗಿಂತಲೂ ವೇಗ ಉಳ್ಳದ್ದು ' ಎಂಬುದಾಗಿ ಪರಸ್ಪರ ವಿರುದ್ಧವಾದ ವಿಶೇಷಣಗಳನ್ನು ಬ್ರಹ್ಮನಿಗೆ ನೀಡಲಾಗಿದೆ. ಇದರ ಪರಿಹಾರ ಹೇಗೆ ?

### ಅದ್ವೈತಿಗಳ ಉತ್ತರ-

'ಪರಬ್ರಹ್ಮ ಅನೇಜತ್ ಅಂದರೆ ನಿಷ್ಕ್ರಿಯ. ಚಲನರಹಿತವಾದದ್ದು. ತನ್ನ ಅವಸ್ಥಿತಿಯಿಂದ ಚ್ಯುತಿ ಇಲ್ಲದೇ ಇದ್ದದ್ದು. ಅಂದರೆ ಸದಾ ಏಕರೂಪವಾದದ್ದು ಎಂದರ್ಥ. ಇದು ಶುದ್ಧಬ್ರಹ್ಮನ ಸ್ವರೂಪ. ಇದು ಧರ್ಮರಹಿತ. ಯಾವಗುಣಗಳೂ ಇದಕ್ಕಿಲ್ಲ. ಗುಣಗಳು, ಧರ್ಮಗಳು ಇರುವ ಬ್ರಹ್ಮ ಶಬಲಬ್ರಹ್ಮ. ಹೀಗಾಗಿ ನಿರ್ಗುಣಬ್ರಹ್ಮ ನಿಷ್ಕ್ರಿಯ ಎಂದು, ಶಬಲಬ್ರಹ್ಮ ಮನಸ್ಸಿಗಿಂತಲೂ ವೇಗ ಉಳ್ಳದ್ದೆಂದು ಉಪನಿಷತ್ತು ಪ್ರತಿಪಾದಿಸಿದೆ. ಯಾವ ವಿರೋಧವೂ ಇಲ್ಲಿ ಸುಳಿಯುವದಿಲ್ಲ. ಈ ನಿರ್ಗುಣ ಬ್ರಹ್ಮ ಒಂದೇ ಸತ್ಯ. ಅದರ ಹೊರತು ಉಳಿದದ್ದು ಮಿಥ್ಯಾ. ಈ ಪರಬ್ರಹ್ಮನನ್ನರಿಯುವ ಸಾಮರ್ಥ್ಯ ಯಾವ ಇಂದ್ರಿಯಗಳಿಗೂ ಇಲ್ಲ. ಇಂತಹಾ ಪರಬ್ರಹ್ಮನನ್ನು ಆಶ್ರಯಿಸಿ ಎಲ್ಲ ಜೀವರ ವ್ಯಾಪಾರಗಳನ್ನು ಮಾಡಿಸುವ ಸೂತ್ರನಾಮಕನಾದ ವಾಯುವು ತನ್ನ ಅಧಿಕಾರದ ಮಿತಿಯಲ್ಲಿರುವ ಕರ್ತವ್ಯಕರ್ಮಗಳನ್ನು ನೆರವೇರಿಸುತ್ತಾ ಇರುತ್ತಾನೆ ' ಹೀಗೆಂದು ಅದ್ವೈತಿಗಳು ಹೇಳುತ್ತಾರೆ.

### ವಿಶಿಷ್ಟಾದ್ವೈತಿಗಳ ಪರಿಹಾರ-

ಪರಮಾತ್ಮ ನಿಷ್ಕ್ರಿಯ. ಏಕೆಂದರೆ ಅವನು ಸರ್ವವ್ಯಾಪ್ತ. ಕ್ರಿಯಾ ಎಂದರೆ ಚಲನೆ. ತಾನಿಲ್ಲದ ದೇಶವನ್ನು ತಲುಪುವದು ಇದೇ ಚಲನ. ಈ ಚಲನ ದೇಶತಃ ಪರಿಮಿತಿ ಇರುವ ಪದಾರ್ಥಕ್ಕೆ ಒಪ್ಪಬಹುದು. ಆದರೆ ಸರ್ವವ್ಯಾಪ್ತವಾದದ್ದು ತಾನು ಹೋಗುವದಕ್ಕೆ ಸ್ಥಳವೇ ಇಲ್ಲ. ಆದ್ದರಿಂದ ಸರ್ವವ್ಯಾಪ್ತವಾದದ್ದು ನಿಶ್ಚಲ. ನಿಷ್ಕ್ರಿಯ. ಇದು ವಸ್ತುಸ್ಥಿತಿ. ಆದರೂ ಪರಮಾತ್ಮನಿಗೆ ಔಪಚಾರಿಕವಾಗಿ ವೇಗವನ್ನು 'ಮನಸೋ ಜವೀಯಃ' ಎಂದು ಉಪನಿಷತ್ತು ಪ್ರತಿಪಾದಿಸುತ್ತದೆ.

ಅಥವಾ ಹರಿಯ ಅಪರಿಮಿತವಾದ ರೂಪ ಎಲ್ಲಿಯೂ ಸಂಚರಿಸಲಾರದು. ಅದು ಮಾತ್ರ ನಿಶ್ಚಲ. ಪರಿಮಿತವಾದ ಮತ್ತೊಂದು ರೂಪ ಪರಮಾತ್ಮನಿಗೆ ಇದೆ. ಅದು ಸರ್ವವ್ಯಾಪ್ತವಲ್ಲ. ಆ ಪರಿಮಿತವಾದ ರೂಪಮಾತ್ರ ಸಂಚಾರಯೋಗ್ಯ. ಅದು ಮನಸ್ಸಿಗಿಂತಲೂ ವೇಗ ಉಳ್ಳದ್ದು. ಅಂತೆಯೇ ಗ್ರಾಹಗ್ರಸ್ತ ಗಜೇಂದ್ರನನ್ನು ರಕ್ಷಿಸಬೇಕೆಂದು ಚಿಂತಿಸಿದ ಸಮಯದಲ್ಲೇ ತನ್ನ ಕೇವಲ ಸಂಕಲ್ಪಬಲದಿಂದ ಅಷ್ಟು ದೂರವಿರುವ ದೇಶದಲ್ಲಿಯೂ ಪ್ರತ್ಯಕ್ಷವಾಗಿ ಸನ್ನಿಹಿತನಾಗುತ್ತಾನೆ. ಇದು ಪ್ರಸಿದ್ಧವಾಗಿದೆ. ಹೀಗಾಗಿ ಮನಸೋ ಜವೀಯಃ.

ಅಂತರ್ಯಾಮಿತಯಾ ಪ್ರಾಪ್ತನಾಗಿದ್ದರೂ ಈ ಪರಮಾತ್ಮನನ್ನು ದೇವತೆಗಳು ತಿಳಿಯುತ್ತಿಲ್ಲ. ಭೂಮಿಯಲ್ಲಿ ಹಿರಣ್ಯನಿಧಿ ಸನ್ನಿಹಿತವಾಗಿದೆ. ಆದರೂ ಕ್ಷೇತ್ರಜ್ಞಾನವಿಲ್ಲದ ಜನರು ಮೇಲೆ ಸಂಚರಿಸುತ್ತಿದ್ದರೂ ಒಳಗಿನ ಆ ಹಿರಣ್ಯನಿಧಿಯನ್ನು ಹೇಗೆ ತಿಳಿಯಲಾರರೋ ಹಾಗೆ ದೇವತೆಗಳೂ ದೇವರನ್ನು ತಿಳಿಯರು.

ಇಂತಹಾ ಪರಮಾತ್ಮ ವೇಗವಾಗಿ ಧಾವಿಸಿ ಹೋಗುವ ಪವನಗರುಡಾದಿಗಳನ್ನು ಮೀರಿ ಮುಂದಿನ ದೇಶವನ್ನು ಮೊದಲೇ ತಲುಪುತ್ತಾನೆ. ಅದಕ್ಕಾಗಿ ದೇವರು ಯಾವ ಪ್ರಯತ್ನವನ್ನೂ ಮಾಡುವದಿಲ್ಲ. ಸರ್ವವ್ಯಾಪ್ತನಾದ ಭಗವಂತನಿಗೆ ಇದು ಅಶಕ್ಯವೇನಲ್ಲ. ಇದ್ದಲ್ಲಿಯೆ ಇದ್ದು ಎಲ್ಲರನ್ನೂ ಮೀರಿಹೋಗುವದು ವಿರುದ್ಧವೇನಲ್ಲ.

ಇಂತಹಾ ಪರಮಾತ್ಮನ ಆಶ್ರಯ ಪಡೆದು, ಸಾಮರ್ಥ್ಯವನ್ನೂ ಅವನಿಂದಲೇ ಪಡೆದ ವಾಯುವು ಜಲಮಹೀಮಹೀಧರಪಯೋಧರಗ್ರಹನಕ್ಷತ್ರಾದಿಗಳನ್ನು ಧರಿಸುತ್ತದೆ. ಇದು ವಿಚಿತ್ರವೆನ್ನುತ್ತಾರೆ ವಿಶಿಷ್ಟಾದ್ವೈತಿಗಳು.

ಈ ವಾದಗಳು ಪ್ರಸಂಗಕ್ಕೆ ಅನುಗುಣವಾಗಿಲ್ಲ. ಪ್ರಮಾಣಕ್ಕೆ ಅನುಸಾರಿಯೂ ಆಗಿಲ್ಲ. 'ಏಜೃ ಕಂಪನೇ' ಎಂಬ ಕ್ರಿಯಾಪದದ ಬಲದಿಂದ ಮೇಲ್ನೋಟಕ್ಕೆ ನಿಷ್ಕ್ರಿಯ ಎಂಬ ಅರ್ಥ ತೋರುತ್ತದೆ. ಆದರೇ ಆಳಕ್ಕೆ ಇಳಿದಾಗ ತಿಳಿಯಾದ ಭಾವಗಳು ಬೆಳಕಿಗೆ ಬರುತ್ತವೆ.

**ಶ್ರೀಮದಾಚಾರ್ಯರ ಪ್ರತಿಪಾದನೆ-**

ಚಲನ, ಕಂಪನ ಇವು ಮೇಲ್ನೋಟಕ್ಕೆ ಒಂದೇ ಎನಿಸಿದರೂ ಅವು ಬೇರೆ ಬೇರೆಯೇ. ಬಲು ಸೂಕ್ಷ್ಮವಾದ ವ್ಯತ್ಯಾಸ ಇವುಗಳಲ್ಲಿ ಇದೆ. ಅದಕ್ಕಾಗಿಯೇ 'ಕಂಪನಂ ಭಯಲಕ್ಷಣಮ್' ಎಂದು ಹೇಳುವದುಂಟು. ಭಯವಾದಾಗ ಜೀವನಲ್ಲಿ ಆಗುವ ಚೇಷ್ಟೆ ಇದು ಕಂಪನ. ಆದ್ದರಿಂದಲೇ 'ಅನೇಜನ್ನಿರ್ಭಯತ್ವಾತ್' ಎಂಬ ಪ್ರಮಾಣ ತಿಳಿಸುವ ಅರ್ಥ ಸುಸಂಗತವಾಗಿದೆ. ಸೂಕ್ಷ್ಮೇಕ್ಷಣಾ ಇದ್ದವರಿಗೆ ಈ ವ್ಯಾಖ್ಯಾನ ಸಹಜವಾಗಿ ಒಪ್ಪವಾಗುತ್ತದೆ.

ಹಾಗೆಯೇ ದೇವರನ್ನು ಒಂದು ಎಂದು ಅಂದದ್ದು ಇನ್ನೊಂದಿಲ್ಲ ಎಂಬ ಭಾವದಿಂದಲ್ಲ, ಪ್ರಧಾನನಾದವನು ಒಬ್ಬನೇ ಎಂದು ಈ ವಚನದ ಹಾರ್ದ. ಮನಸ್ಸಿಗಿಂತಲೂ ಹೆಚ್ಚಿನ ವೇಗ ಈ ಭಗವಂತನಿಗೆ ಇದೆ. ಆದರೇ ಮನಸ್ಸು ಎಲ್ಲಿಯೂ ಹೋಗುವದಿಲ್ಲ. ಅದಕ್ಕೆ ಆಗುವದು ಬಾಹ್ಯಪದಾರ್ಥಗಳ ಸ್ಮರಣೆ ಮಾತ್ರ. ಮನಸ್ಸು ಚಿಂತಿಸಿದ ಸಮಯದಲ್ಲಿಯೇ ಬಾಹ್ಯಪದಾರ್ಥಗಳು ಸ್ಮರಣೆಯಲ್ಲಿ ಬರುತ್ತವೆ. ಈ ಮನಸ್ಸಿಗಿಂತಲೂ ಹೆಚ್ಚಿನ ವೇಗ ಪಡೆದವನು ಪರಮಾತ್ಮ.

ದೇವತೆಗಳೆಲ್ಲರೂ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡವರೇ. ಆದ್ದರಿಂದ ದೇವತೆಗಳಿಗೆ ದೇವರ ಅರಿವಿಲ್ಲವೆಂಬ ಶ್ರೀವೈಷ್ಣವರ ಹೇಳಿಕೆ ಸಮ್ಮುಗ್ಧವಾಗಿದೆ. ಈ ವಿಷಯದಲ್ಲಿ ಆಚಾರ್ಯರು ಮಾತ್ರ ಬಹಳ ಸೂಕ್ಷ್ಮವಾದ ಪರಿಹಾರವನ್ನು ಹೇಳಿದ್ದಾರೆ. ದೇವತೆಗಳು ದೇವರನ್ನರಿತಿದ್ದಾರೆ. ಆದರೆ ಪರಿಪೂರ್ಣವಾಗಿ ಅವನನ್ನು ತಿಳಿಯಲು ರಮೆಯಿಂದಲೂ ಸಾಧ್ಯವಿಲ್ಲವೆಂದಮೇಲೆ ಇತರ ದೇವತೆಗಳಿಗಂತೂ ಅವನನ್ನು ತಿಳಿಯಲು ಸುತರಾಂ ಸಾಧ್ಯವಿಲ್ಲ, ಇಂತಹಾ ಅನಂತವಾದ ಮಹಿಮೆ ಭಗವಂತನಿಗೆ ಇದೆ. ತನಗೆ ಮಾತ್ರ ಎಲ್ಲರ ಸಮಗ್ರ ಜ್ಞಾನ ಯಾವಾಗಲೂ ಇದೆ. ಇದೆಲ್ಲ ಅವನ ಅರಿವಿನ ಅಂಶಾಂಶ ಮಾತ್ರ. ಇಂತಹಾ ಹರಿಯ ಮಹಿಮೆ ಅದ್ಭುತ. ಅಚಿಂತ್ಯ. ಅವನ ಎಲ್ಲ ರೂಪಗಳೂ ಸರ್ವತ್ರ ವ್ಯಾಪ್ತ, ಎಲ್ಲ ರೂಪಗಳಿಗೂ ಮನಸ್ಸನ್ನು ಮೀರುವ ವೇಗವಿದೆ. ಸರ್ವತ್ರ ವ್ಯಾಪ್ತವಾದ ರೂಪವೇ ಓಡುತ್ತಾ ಎಲ್ಲರನ್ನು ದಾಟಿ ಹೋಗುತ್ತದೆ. ತರ್ಕಕ್ಕೆ ಯುಕ್ತಿಗಳಿಗೆ ಈ ಶಕ್ತಿ ನಿಲುಕುವದಿಲ್ಲ, ಇದು ಅದ್ಭುತ.

ವಾಯುದೇವರೇ ಎಲ್ಲ ಜೀವರಲ್ಲಿ ಇದ್ದು ಸಕಲಕರ್ಮಗಳನ್ನು ಮಾಡಿಸುತ್ತಾರೆ. ಆದರೂ ಜೀವರಿಂದ ತಾವು ಮಾಡಿಸಿದ ಜೀವರ ಪುಣ್ಯಕರ್ಮಗಳನ್ನು ಮಾತ್ರ ಹರಿಪೂಜಾರೂಪವಾಗಿ ಭಗವಂತನಿಗೆ ಸಮರ್ಪಿಸುತ್ತಾರೆ. 'ದೀನಂ ದೂನಂ ಅನಾಥಂ ಶರಣಾಗತಂ ಏನಂ ಉದ್ಧರ' ಎಂದು ವಿಜ್ಞಾಪನೆ ಮಾಡುತ್ತಾರೆ. ಆವಾಗ ನಾವು ಜೀವನದುದ್ದಕ್ಕೂ ಮಾಡಿದ ಕರ್ಮಗಳೆಲ್ಲ ನಮಗೆ ಮೋಕ್ಷ ಕೊಡಲು ಸನ್ನದ್ಧವಾಗುತ್ತವೆ. ಇದು ಆಚಾರ್ಯರು ಪ್ರತಿಪಾದಿಸಿರುವ ಅರ್ಥ. ಪೂರ್ವಸಂಗತವಾದ ಅಪೂರ್ವವಾದ ಅರ್ಥ.

ತದೇಜತಿ ತನ್ನೇಜತಿ ತದ್ದೂರೇ ತದ್ವಂತಿಕೇ ।
ತದಂತರಸ್ಯ ಸರ್ವಸ್ಯ ತದು ಸರ್ವಸ್ಯ ಬಾಹ್ಯತಃ ॥ 5 ॥

ಉಪನಿಷತ್ತು ಒಂದು ಬಾರಿ ಹೇಳಿದ ತತ್ತ್ವವನ್ನು ಮತ್ತೆ ತಿಳಿಸುತ್ತದೆ . ಇದು ದೋಷವಲ್ಲ, ಆ ತತ್ತ್ವದ ಮೇಲಿರುವ ಆದರವನ್ನು ಸೂಚಿಸುತ್ತದೆ.

ಶುದ್ಧ ಬ್ರಹ್ಮ ಚಲನ ಮೊದಲಾದ ಕ್ರಿಯಾಶೂನ್ಯ. ಇದು ವಸ್ತುಸ್ಥಿತಿ. ದೇಹ ಮೊದಲಾದ ಉಪಾಧಿಗಳನ್ನು ಪಡೆದಾಗ ಚಲಿಸುವಂತೆ ತೋರುತ್ತದೆ. ಈ ಉಪಾಧಿಗಳು ಧರ್ಮಗಳು

ಇವೆಲ್ಲ ಅವಾಸ್ತವ. ತೋರಿಕೆ ಮಾತ್ರ. ಜೀವನೇ ಸ್ವಯಂ ಬ್ರಹ್ಮನಾದುದರಿಂದ ಐಕ್ಯಜ್ಞಾನ ಪಡೆದ ಜೀವನಿಗೆ ಬ್ರಹ್ಮ ಬಹಳ ಹತ್ತಿರ. ತನಗೆ ತಾನು ಹತ್ತಿರವಲ್ಲವೆ ಹಾಗೆ. ತಾನೇ ಸ್ವಯಂ ಬ್ರಹ್ಮನಾದರೂ ಐಕ್ಯಜ್ಞಾನವಿಲ್ಲದವರಿಗೆ ಬಹಳ ದೂರ. ಇಂತಹಾ ಪರಬ್ರಹ್ಮ ನಾಮರೂಪ ಕ್ರಿಯಾತ್ಮಕವಾದ ಎಲ್ಲ ಜಗದ ಒಳಗೆ ನೆಲೆಸಿದ್ದಾನೆ. ವ್ಯಾಪಕವಾದುದರಿಂದ ಗಗನದಂತೆ ಜಗದ ಹೊರಗೂ ತುಂಬಿಕೊಂಡಿದ್ದಾನೆ. ಒಳಗೂ ಇದ್ದಾನೆ.

ನಿಜವಾಗಿ ಇಲ್ಲಿ ಆತ್ಮನಿಗೆ ಒಳಗೆ ಹೊರಗೆ ನಡುವೆ ಎಂಬುದು ಯಾವದೂ ಇಲ್ಲ . ಯಾಕೆಂದರೆ ಅವನು ನಿರಂತರ. ಬಿಡುವಿಲ್ಲದವ. ನಿಬಿಡನಾದವ. ಒಳಗೆ ಹೊರಗೆ ನಡುವೆ ಎಂದು ಏನೆಲ್ಲ ತೋರುತ್ತದೋ ಅದೆಲ್ಲ ಆಕಾಶದಿಂದ ತೋರುವ ಭಾವನೆ ಮಾತ್ರ. ವಸ್ತುಸ್ಥಿತಿಯಲ್ಲ. ಇದಿಷ್ಟು ಅದ್ವೈತಿಗಳ ವ್ಯಾಖ್ಯಾನ. ಇದೆಲ್ಲವನ್ನು ತತ್ತ್ವಸಂಹಿತೆ ಅಲ್ಲಗಳೆಯುತ್ತದೆ. ಅದ್ವೈತಿಗಳ ಈ ಭಾವಕ್ಕೆ ತತ್ತ್ವಸಂಹಿತಾ ಆರ್ಥಿಕವಾಗಿ ಸ್ಪಂದಿಸುವದಿಲ್ಲ. ಇದನ್ನು ನಾವು ಗಮನಿಸಬೇಕು. ನಮ್ಮ ಕಲ್ಪನೆಗೆ ಸರ್ವಥಾ ಎಟುಕದ ಭಾವವನ್ನು ತತ್ತ್ವಸಂಹಿತಾ ಬಯಲುಗೊಳಿಸುತ್ತದೆ. ಅದನ್ನು ಆಚಾರ್ಯರು ಇಲ್ಲಿ ಉದಾಹರಿಸುತ್ತಾರೆ.

ಪರಮಾತ್ಮ ಸ್ವಯಂ ತಾನು ಭಯವಿರಹಿತನಾಗಿದ್ದಾನೆ. ಇದನ್ನು ಈಗಾಗಲೆ ಉಪನಿಷತ್ತು ತಿಳಿಸಿಹೇಳಿದೆ. ಇನ್ನೂ ಹೆಚ್ಚಿನ ವಿಷಯವನ್ನು ಈ ಮಂತ್ರ ತಿಳಿಸುತ್ತದೆ. ಈ ಭಗವಂತನನ್ನು ಕಂಡು ಬ್ರಹ್ಮ ಮೊದಲಾದ ಜಗತ್ತು ಭಯಪಡುತ್ತದೆ. ಭಯದಿಂದ ತಮ್ಮ ತಮ್ಮ ಕರ್ತವ್ಯ ಕರ್ಮಗಳಲ್ಲಿ ನಿರತರಾಗುತ್ತಾರೆ. 'ಭೀಷಾಸ್ಮಾದ್ವಾತಃ ಪವತೇ' ಮೊದಲಾದ ಶ್ರುತಿಗಳು ಇದಕ್ಕೆ ಸಂವಾದಿಯಾಗಿವೆ. ಈ ಪರಮಾತ್ಮ ಸರ್ವಗತ. ಆದಾಗಿ ಬಲು ದೂರದಲ್ಲಿದ್ದಾನೆ ಎಂಬುದು ಸತ್ಯ. ಸನಿಹದಲ್ಲಿದ್ದಾನೆ ಎಂಬುದೂ ತಥ್ಯ. ಅಲ್ಲದೇ ಹೊರಗಡೆ ಇದ್ದು ಎಲ್ಲರಿಗೂ ಆಶ್ರಯನಾಗಿದ್ದಾನೆ. ಎಲ್ಲರ ಅಂತರದಲ್ಲಿದ್ದು ನಿಯಾಮಕನಾಗಿದ್ದಾನೆ. ಇದು ತತ್ತ್ವಸಂಹಿತಾ ಈ ಮಂತ್ರಕ್ಕೆ ವ್ಯಾಖ್ಯಾನಿಸಿದ ರೀತಿ.

ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ ।
ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ॥ 6 ॥

ಅವ್ಯಕ್ತ ಮೊದಲು ಸ್ಥಾವರದವರೆಗಿರುವ ಎಲ್ಲ ಭೂತಗಳು ಆತ್ಮವ್ಯತಿರಿಕ್ತವಾಗಿ ಇಲ್ಲ. ಬ್ರಹ್ಮನಿಂದ ಭಿನ್ನವಾಗಿಲ್ಲ. ಅವೆಲ್ಲವೂ ಪರಬ್ರಹ್ಮಸ್ವರೂಪವೇ ಆಗಿವೆ. ಪರಬ್ರಹ್ಮನಲ್ಲಿಯೆ ಇವೆಲ್ಲವೂ ಕಲ್ಪಿತವಾಗಿವೆ. ಆದ್ದರಿಂದ ಎಲ್ಲವೂ ಏಕವಾಗಿದೆ. ಪರಬ್ರಹ್ಮನ ಹೊರತು ಪರ ಯಾವದೂ ಇಲ್ಲ. ಇದನ್ನೆ ಹಿಂದಿನ ಮಂತ್ರಗಳು ತಿಳಿಸಿವೆ. ಇಂತಹಾ ಜ್ಞಾನವನ್ನು ಪಡೆದ ವ್ಯಕ್ತಿಗೆ ಯಾವದೂ ಅಪ್ರಿಯವಾಗಿ ದ್ವೇಷ್ಯವಾಗುವದಿಲ್ಲ. ಆದ್ದರಿಂದ ಯಾವುದನ್ನೂ ಜರಿಯುವ ಅವಸರ ಅವನಿಗೆ ಬರುವದಿಲ್ಲ. ಹೀಗೆ ಶಂಕರರ ಅಭಿಪ್ರಾಯ. ಇದು ಅವರ ಕಲ್ಪನೆ ಮಾತ್ರ. ಇದು ಕೂಡಾ ಅಪ್ರಾಮಾಣಿಕವಾಗಿದೆ. ಸೌಕರಾಯಣಶ್ರುತಿಗೆ ವಿರುದ್ಧವೂ ಆಗಿದೆ.

ಈ ಮಂತ್ರಕ್ಕೆ ಸಂವಾದಿಯಾಗಿ ಸೌಕರಾಯಣಶ್ರುತಿ ತಿಳಿಸುವ ಅರ್ಥ ಬಹಳ ಸೊಗಸಾಗಿದೆ.

ಪರಮಾತ್ಮ ಅನೇಜತ್ ಭಯರಹಿತ. ಸರ್ವವ್ಯಾಪ್ತ. ಸರ್ವಸ್ವಾಮಿ. ಚೇತನಾಚೇತನಾತ್ಮಕವಾದ ಪ್ರಪಂಚವೆಲ್ಲ ಈ ಪರಮಾತ್ಮನನ್ನೇ ಆಶ್ರಯಿಸಿಕೊಂಡಿದೆ. ಎಲ್ಲ ಪದಾರ್ಥಗಳಲ್ಲಿಯೂ ಪರಮಾತ್ಮ ತತ್ತದಾಕಾರನಾಗಿ ಸತ್ತಾದಿಪ್ರದನಾಗಿ ನಿಯಾಮಕನಾಗಿದ್ದಾನೆ. ಹೀಗೆಂದು ಉಪಾಸನೆ ಮಾಡುವ ಮಹಾನುಭಾವರಿಗೆ ಮಾತ್ರ ಯಾರನ್ನು ಕಂಡರೂ ಭಯವಾಗದು. ತಮ್ಮನ್ನು ತಾವು ರಕ್ಷಣೆ ಮಾಡಿಕೊಳ್ಳುವ ಆವಶ್ಯಕತೆ ಅವರಿಗೆಂದಿಗೂ ಬರುವದಿಲ್ಲ. ವಿರುದ್ಧವಾಗಿ ತಿಳಿದವರಿಗೆ ಅಡಿಗಡಿಗೂ ಭಯ ತಪ್ಪಿದ್ದಲ್ಲ.

ಅಲ್ಲದೆ ಎಲ್ಲದಕ್ಕೂ ಪರಬ್ರಹ್ಮ ಆಧಾರ. ಎಲ್ಲವೂ ಆಧೇಯವೆಂದು ಬ್ರಹ್ಮನಿಗೂ ಭೂತಗಳಿಗೂ ಆಧಾರಾಧೇಯಭಾವವನ್ನು ಸ್ಪಷ್ಟವಾಗಿ ಪ್ರತಿಪಾದಿಸುವ ಶ್ರುತಿಗೆ ಐಕ್ಯಾರ್ಥವನ್ನು ಹೇಳುವದು ಸೊಗಸುವದಿಲ್ಲ. ಆ ಅರ್ಥ ಪರಿಪೂರ್ಣವಲ್ಲ. ಪ್ರಮಾಣಗಮ್ಯವೂ ಅಲ್ಲ.

ಯಸ್ಮಿನ್ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ ।
ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥ 7 ॥

ಹಿಂದಿನ ಮಂತ್ರದ ಭಾವವನ್ನೇ ಈ ಮಂತ್ರ ತಿಳಿಸುತ್ತದೆ. ಅಲ್ಲಿಯ 'ಯಸ್ತು ಸರ್ವಾಣಿ ಭೂತಾನಿ ಆತ್ಮನ್ಯೇವ' ಎಂಬುದರ ಭಾವವನ್ನು ಇಲ್ಲಿಯ 'ಯಸ್ಮಿನ್ಸರ್ವಾಣಿ ಭೂತಾನಿ' ಎಂಬ ವಾಕ್ಯ ತಿಳಿಸುತ್ತದೆ. 'ಸರ್ವಭೂತೇಷು ಚಾತ್ಮಾನಮ್' ಎಂಬಲ್ಲಿಯ ವಿಚಾರವನ್ನೆ 'ಆತ್ಮೈವಾಭೂತ್' ಎಂಬ ವಾಕ್ಯ ಪ್ರತಿಪಾದಿಸುತ್ತದೆ. ಆದ್ದರಿಂದ ಹೀಗೆ, ಪುನರುಕ್ತವಾಗುವಂತೆ ಮಂತ್ರದ ಅರ್ಥವನ್ನು ವಿವರಿಸುವದು ಸರಿಯಾಗದು. ಹೊಸದಾದ ವಿವರವನ್ನೆ ಮಂತ್ರಕ್ಕೆ ನೀಡಬೇಕು.

ನಿಜ. ಇಲ್ಲಿ ಹಿಂದಿನದನ್ನೇ ಅನುವಾದ ಮಾಡುತ್ತಿದ್ದರೂ ಹೆಚ್ಚಿನ ಅಂಶವೂ ಇದೆ. ಆದ್ದರಿಂದ ಪುನರುಕ್ತಿ ಇದ್ದರೂ ಅದು ದೋಷವಾಗುವದಿಲ್ಲ.

ಹಿಂದಿನ ಮಂತ್ರದಲ್ಲಿ ಭಗವಂತನನ್ನು ಸರ್ವಾಧಾರ ಸರ್ವಗತ ಎಂದು ತಿಳಿದವರಿಗೆ ಭಯಾಭಾವರೂಪವಾದ ಫಲ ಉಕ್ತವಾಗಿದೆ.

ಭಗವಂತನ ಸರ್ವಗತತ್ವವನ್ನು, ಅವನಲ್ಲಿಯ ಏಕತ್ವವನ್ನು ಅಪರೋಕ್ಷತಃ ಕಂಡವರಿಗೆ ಮೋಹಾಭಾವರೂಪವಾದ ಫಲ ಹಾಗೂ ತತ್ಪ್ರಯುಕ್ತ ಶೋಕಾಭಾವರೂಪವಾದ ಫಲ ಪ್ರಾಪ್ತವಾಗುತ್ತದೆಂದು ಈ ಮಂತ್ರ ತಿಳಿಸುತ್ತಿದೆ. ಹೀಗೆ ಸಾಧನದಲ್ಲಿ ಮತ್ತು ಫಲದಲ್ಲಿ ಆಧಿಕ್ಯವನ್ನು ಈ ಮಂತ್ರ ಹೇಳುತ್ತಿದ್ದುದರಿಂದ ಪುನರುಕ್ತಿಗೆ ಸರ್ವಥಾ ಅವಕಾಶವಿಲ್ಲ.

ಪರಬ್ರಹ್ಮನೊಬ್ಬನೇ ಅನಾದಿಕಾಲದಿಂದ ಅನಂತಕಾಲದವರೆಗೆ ಎಲ್ಲ ಭೂತಗಳಿಗೂ ನಿಯಾಮಕನಾಗಿರುತ್ತಾನೆ. ಆಯಾ ಪದಾರ್ಥಗಳಲ್ಲಿ ಆಯಾ ಆಕಾರದಿಂದ ಹರಿಯು ಇದ್ದಾನೆಂದು ಆ ರೂಪಗಳಿಗೆ ಭೇದವನ್ನು ಚಿಂತಿಸುವದು ಸರಿಯಲ್ಲ. ಅನೇಕ ರೂಪಗಳಲ್ಲಿಯೂ ಏಕತ್ವವಿದೆ. ಇದು ಭಗವಂತನ ಲೀಲಾವೈಭವ. ಜ್ಞಾನದುರ್ಬಲವಾದ ಮನಸ್ಸು ಈ ವೈಭವವನ್ನಂಗೀಕರಿಸಲು ಮುಂದಾಗುವದಿಲ್ಲ. ಯಾರು ಈ ಜ್ಞಾನವನ್ನು ಪಡೆದಿದ್ದಾರೋ ಅನೇಕರೂಪಗಳಲ್ಲಿ ಏಕತ್ವವನ್ನು ಚಿಂತಿಸುತ್ತಾರೋ ಅವರಿಗೆ ಎಲ್ಲ ಕಡೆಗೂ ದೇವರು ಲಭ್ಯನಾಗುತ್ತಾನೆ. ಇವನು ನಾನು. ಅವರು ನನ್ನವರು. ಇದು ನನ್ನದು. ಅದು ಅವನದ್ದು . ಎಂಬ ಮೋಹ ಮಾಯವಾಗುತ್ತದೆ. ಮಮತೆ ಮೋಹವೇ ಶೋಕಕ್ಕೆ ಕಾರಣ. ಅವುಗಳು ಮಾಯವಾದ ಮೇಲೆ ಶೋಕಕ್ಕೆ ಸರ್ವಥಾ ಅವಕಾಶವಿಲ್ಲ. ಆದ್ದರಿಂದ ಶೋಕಮೋಹಗಳ ವಿನಾಶಕ್ಕೆ ಈ ಜ್ಞಾನ ತೀರ ಅನಿವಾರ್ಯವಾಗಿದೆ.

ಸ ಪರ್ಯಗಾಚ್ಛುಕ್ರಮಕಾಯಮವ್ರಣಮಸ್ನಾವಿರಂ ಶುದ್ಧಮಪಾಪವಿದ್ಧಮ್ ।
ಕವಿರ್ಮನೀಷೀ ಪರಿಭೂಃ ಸ್ವಯಂಭೂಃ ಯಾಥಾತಥ್ಯತೋಽರ್ಥಾನ್
ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ ॥ 8 ॥

'ಅನೇಜದೇಕಮ್' 'ತದೇಜತಿ' ಮೊದಲಾದ ಮಂತ್ರಗಳು ಪರಬ್ರಹ್ಮನನ್ನು ಪ್ರತಿಪಾದಿಸಿವೆ. ಅದರ ಸ್ವರೂಪಲಕ್ಷಣವೇನೆಂಬುದನ್ನು ಪ್ರತಿಪಾದಿಸಲು 'ಸ ಪರ್ಯಗಾತ್' ಎಂಬ ಮಂತ್ರ ಹೊರಟಿದೆ ಎಂದು ಅದ್ವೈತಿಗಳ ಭಾವನೆ.

ಆದರೆ ಈ ಅವತರಣಿಕೆ ಸರಿಯಾದುದಲ್ಲ. ಯಾಕೆಂದರೆ ಇಲ್ಲಿ ಪ್ರಥಮಾವಿಭಕ್ತ್ಯಂತವಾದ ಕವಿಃ ಮನೀಷೀ ಮೊದಲಾದ ಶಬ್ದಗಳೂ ಇವೆ. ದ್ವಿತೀಯಾವಿಭಕ್ತ್ಯಂತವಾದ ಶುಕ್ರಂ ಅಕಾಯಂ ಮೊದಲಾದ ಶಬ್ದಗಳೂ ಇವೆ. ಪರಬ್ರಹ್ಮನ ಲಕ್ಷಣಗಳನ್ನು ಹೇಳುವ ಉದ್ದೇಶ ಈ ಮಂತ್ರಕ್ಕೆ ಇದ್ದರೆ ದ್ವಿತೀಯಾವಿಭಕ್ತ್ಯಂತವಾದ ಶಬ್ದಗಳು ಅನನ್ವಿತವಾಗಿ ಉಳಿಯುತ್ತವೆ.

ವಿಭಕ್ತಿವಿಪರಿಣಾಮ ಮಾಡಿಕೊಂಡು ಅಂದರೆ ದ್ವಿತೀಯಾವಿಭಕ್ತಿಯಲ್ಲಿದ್ದುದನ್ನು ಪ್ರಥಮಾವಿಭಕ್ತ್ಯಂತವಾಗಿ ಬದಲಿಸಿಕೊಂಡು ಅರ್ಥ ಹೇಳುವ ವಾಡಿಕೆ ಇದೆ. ಆದರೆ ಪ್ರಮಾಣಗಳು ಅನುಕೂಲವಾಗಿರುವಾಗ ಮಾತ್ರ ಹಾಗೆ ಮಾಡುವದು ಸೂಕ್ತ. ಈಗ ವಿಭಕ್ತಿ ವಿಪರಿಣಾಮ ಮಾಡಿ ಅರ್ಥ ಹೇಳಲು ಯಾವ ಪ್ರಮಾಣಗಳೂ ಇಲ್ಲ. ಬದಲಾಗಿ ವಿಭಕ್ತಿ ವಿಪರಿಣಾಮ ಮಾಡಿಕೊಳ್ಳದೆಯೇ ಈ ಮಂತ್ರದ ಅರ್ಥವನ್ನು ವರಾಹಪುರಾಣ ಸೊಗಸಾಗಿ ನಿರೂಪಿಸಿದೆ.

ಅದಕ್ಕೆ ಅನುಗುಣವಾಗಿ ಟೀಕಾಕೃತ್ಪಾದರು ನೀಡಿದ ರಮಣೀಯವಾದ ಅವತರಣಿಕೆ ಹೀಗಿದೆ. ಅಪರೋಕ್ಷಜ್ಞಾನಿಯಾದವನಿಗೆ ಶೋಕಮೋಹಾದಿಗಳಿರುವದಿಲ್ಲ ಎಂಬುದನ್ನು

ಹಿಂದಿನ ಮಂತ್ರ ತಿಳಿಸಿದೆ. ಯುಕ್ತಿಪೂರ್ವಕವಾಗಿ ಈ ವಿಷಯವನ್ನು ಪ್ರತಿಪಾದಿಸಲು ಈ ಮಂತ್ರ ಪ್ರವೃತ್ತವಾಗಿದೆ. ಹೀಗೆ ತಿಳಿದರೆ ಯಾವ ಗೋಜಿಲ್ಲದೇ ಸುಲಭವಾಗಿ ಮಂತ್ರಕ್ಕೆ ಅರ್ಥವನ್ನು ತಿಳಿಯಬಹುದು.

ಶುಕ್ರಂ ಇತ್ಯಾದಿ ವಿಶೇಷಣಮಂಡಿತನಾದ ಬ್ರಹ್ಮನನ್ನು ಜೀವ ಹೊಂದಿದ್ದಾನೆ. ಎಂದು ದ್ವಿತೀಯಾಂತವಾದ ಶಬ್ದಗಳಿಗೆ ಅನ್ವಯ. ಕವಿಃ ಇತ್ಯಾದಿ ವಿಶೇಷಣವಿಶಿಷ್ಟನಾದವನು ಜಗತ್ತನ್ನು ಸೃಷ್ಟಿಮಾಡಿದ. ಹೀಗೆ ಅನ್ವಯಮಾಡುವದು ಸೂಕ್ತವೆಂದು ವರಾಹಪುರಾಣ ಅರುಹುತ್ತದೆ.

ರಾಜಾದಿಗಳಿಗೆ ಶರಣಾದ ಮಾತ್ರಕ್ಕೆ ಸುಖದ ಸರಮಾಲೆ ಖಂಡಿತವೆಂದು ಬಗೆಯುವದು ತರವಲ್ಲ. ಅವನೂ ದುಃಖಗಳಿಗೆ ಭಾಗಿಯಾಗುವದು ಪ್ರತ್ಯಕ್ಷಸಿದ್ಧವಾಗಿದೆ. ಹೀಗೆ ದೃಷ್ಟಾನುಗುಣವಾಗಿ ಹೇಳುವದಾದರೆ ದೇವರನ್ನು ಬೆನ್ನುಹತ್ತಿದವಗೂ ದುಃಖಗಳು ತಪ್ಪಿದ್ದಲ್ಲ ಎಂದನಿಸುತ್ತದೆ. ಆದರೆ ಅದು ಸರಿಯಲ್ಲ. ರಾಜನಂತೆ ದೇವರು ದುಃಖಿಯಲ್ಲ. ದುಃಖದ ಲೇಶವೂ ಅವಗಿಲ್ಲ. ಸದಾ ಸುಖಪೂರ್ಣ. ಇಂಥಹಾ ಪರಮಾತ್ಮನನ್ನು ಪಡೆಯುವದೇ ಶೋಕಾದಿಗಳ ಸಂಕೋಲೆಯನ್ನು ಕಳೆದುಕೊಳ್ಳಲು ಏಕಮೇವ ಉಪಾಯ.ಅದನ್ನು ವಿವರವಾಗಿ ತಿಳಿಸಲು ಈ ಮಂತ್ರ ಹೊರಟಿದೆ.

ಶೋಕದ ಸೊಂಕಿಲ್ಲದವನು ಪರಮಾತ್ಮ. ಸಮಯದ ಸೀಮೆ ಇಲ್ಲದವನು. ಅಂತೆಯೇ ಅವನು ಸನಾತನ. ಸದಾತನ. ನಿತ್ಯ. ದೇಶದ ರೇಷೆಯೂ ಅವಗಿಲ್ಲ. ಸರ್ವವ್ಯಾಪ್ತ. ಎಲ್ಲೆಡೆಯೂ ಪೂರ್ಣ. ಇವನ ಗುಣಗಳಿಗೆ ಎಲ್ಲೆ ಇಲ್ಲವೇ ಇಲ್ಲ. ಅನಂತಗುಣಪರಿಪೂರ್ಣ-ನಾದವನು. ಸಂಸಾರದ ರಾಡಿಯನ್ನಂಟಿಸುವ ಲಿಂಗದೇಹವಿರಹಿತನಾದವನು. ದುಃಖಾದಿಗಳ ದೊರಕಿಸಲೆಂದೇ ಇರುವ ಸ್ಥೂಲದೇಹವಿಲ್ಲದವನು. ಈ ದೇಹಗಳ ಪ್ರಾಪ್ತಿಗೆ ಮೂಲವಾದದ್ದು ಪಾಪ. ಪಾಪದ ಲೇಪವಿಲ್ಲದವಗೆ ದೇಹದ ಸಂಪರ್ಕ ಎಂದಿಗೂ ಇಲ್ಲ. ಪರಮಪಾವನಚರಿತ ಪರಮಾತ್ಮ ಸದಾ ಶುದ್ಧ. ಹೀಗಾಗಿ ಪಾಪವಿದ್ಧನಲ್ಲ. ಇಂತಹಾ ಶೋಕಾದಿಶೂನ್ಯನಾದ ಪರಮಾತ್ಮನ ಪದವನ್ನು ಪಡೆದವನಿಗೆ ಶೋಕವಿಮೋಕವಾಗುವಲ್ಲಿ ಸಂದೇಹವಿಲ್ಲ.

ಇಲ್ಲಿ ದೇವರಿಗೆ ಶೋಕಾಭಾವವನ್ನು ವಿವರಿಸುತ್ತಾ ದೇಹವಿಲ್ಲದ್ದರಿಂದ ಎಂದು ಯುಕ್ತಿಯನ್ನು ಹೇಳಲಾಗಿದೆ. ಅದರ ಮೇಲೆ ಮತ್ತೆ ಸಂದೇಹಗಳು ಮುತ್ತಿಗೆ ಹಾಕುತ್ತವೆ. ಅವುಗಳನ್ನು ಹೇಗೆ ಬದಿಗೊತ್ತಬಹುದೆಂದು ವರಾಹಪುರಾಣ ವಿವರಿಸುತ್ತದೆ.

ದೇವರಿಗೆ ಪ್ರಾಕೃತವಾದ ದೇಹವಿಲ್ಲ. ಆದರೆ ಅವನ ದೇಹ ಬಲು ವಿಲಕ್ಷಣ. ನಿರ್ದುಷ್ಟಜ್ಞಾನಾನಂದಾದಿಗಳೇ ಅವನ ದೇಹ. ತಲೆ, ಕಾಲು, ಕೈ, ಮೈ ಒಟ್ಟಾರೆ ಎಲ್ಲ ಅವಯವಗಳೂ ಜ್ಞಾನಾನಂದರೂಪ. ಯಾವ ಅವಯವವೂ ಪ್ರಾಕೃತವಲ್ಲ. ಹೀಗಾಗಿ ಜಗತ್ಸರ್ಜನ ಸೂಪಪನ್ನವಾಗುತ್ತದೆ.

ಇಲ್ಲದ ಸುಳ್ಳಾದ ಜಗತ್ತನ್ನು ಸೃಷ್ಟಿ ಮಾಡಲು ದೇಹ ಯಾಕೆ ಬೇಕು? ಹಗ್ಗದಲ್ಲಿ ಹಾವನ್ನು ಸೃಷ್ಟಿಸಲು ಯಾರೂ ದೇಹಪಡೆದು ಬರಬೇಕಾಗಿಲ್ಲ ಎಂಬ ಸಂಶಯಕ್ಕೆ ಇಲ್ಲಿ ಅವಕಾಶವಿಲ್ಲ. ಜಗತ್ತು ಸತ್ಯ. ಅದು ಪ್ರತ್ಯಕ್ಷಸಿದ್ಧ. ಜಗದ ಪ್ರಾತ್ಯಕ್ಷಿಕತೆಯನ್ನು ಅಲ್ಲಗಳೆಯುವವರು ಶ್ರುತಿ-ಸೂತ್ರ- ಪುರಾಣ ಇತಿಹಾಸಗಳ ವಿರೋಧಗಳನ್ನು ಸಹಿಸಲಾಗದೇ ಸೋಲೊಪ್ಪಬೇಕಾಗುತ್ತದೆ.

ಚರಾಚರಪ್ರಪಂಚದ ಪರಿಪೂರ್ಣವಾದ ಜ್ಞಾನವಿದ್ದವನು ಪರಮಾತ್ಮ. ಅವನು ಸರ್ವಜ್ಞ. ರಮಾಬ್ರಹ್ಮಾದಿಗಳು ಸೃಷ್ಟಿಕಾರಣರಾದರೂ ಅವರ ಮನಸ್ಸಿನಲ್ಲಿದ್ದು ಪ್ರೇರಕನಾಗಿದ್ದಾನೆ. ಎಲ್ಲರನ್ನೂ ಎಲ್ಲವನ್ನೂ ಪರಿಭವಗೊಳಿಸಿ ತನ್ನ ಅಧೀನವಾಗಿರಿಸಿಕೊಂಡಿದ್ದಾನೆ. ತಾನು ಮಾತ್ರ ಯಾರ ಹಂಗೂ ಇಲ್ಲದವನು. ಅಸಮರ್ಥನಲ್ಲ. ಸ್ವಾರ್ಥಿಯೂ ಅಲ್ಲ. ಹೀಗಾಗಿ ಮಾಯಾಸೃಷ್ಟಿಯನ್ನು ಮಾಡುವ ಕಾರಣ ಅವನಿಗಿಲ್ಲ. ಆದ್ದರಿಂದ ಯಥಾರ್ಥವಾದ ಜಗತ್ತನ್ನೇ ಅನಾದಿಕಾಲದಿಂದಲೂ ಒಂದೇ ರೀತಿಯಾಗಿ ಸೃಜಿಸುತ್ತಾ ಬಂದಿದ್ದಾನೆ.

**ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂ ರತಾಃ ॥ 9 ॥**

**ಅನ್ಯದೇವಾಹುರ್ವಿದ್ಯಯಾ ಅನ್ಯದಾಹುರವಿದ್ಯಯಾ ।**
**ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥ 10 ॥**

**ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಹ ।**
**ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ ॥ 11 ॥**

ಭಗವಂತನ ಯಥಾರ್ಥಜ್ಞಾನವೇ ಮೋಕ್ಷಸಾಧನ. ನಿಜ. ಆದರೂ ಅಷ್ಟು ಮಾತ್ರ ಸಾಲದು. ಜೊತೆಗೆ ಅನ್ಯಥಾಜ್ಞಾನದ ನಿಂದೆಯನ್ನೂ ಅವಶ್ಯವಾಗಿ ಮಾಡಬೇಕು.

ಅನ್ಯಥಾಜ್ಞಾನದಲ್ಲಿ ಆಸಕ್ತರಾದವರಿಗೆ ತಮಃಪ್ರಾಪ್ತಿಯಾಗುವದು ನಿಶ್ಚಿತ. 'ಅಸುರ್ಯಾ ನಾಮ' ಎಂಬ ಮಂತ್ರ ಇದನ್ನು ಈಗಾಗಲೇ ತಿಳಿಸಿದೆ. ಆದರೆ ಮಿಥ್ಯಾಜ್ಞಾನವನ್ನು ಪಡೆದ ಮಾತ್ರಕ್ಕೆ ತಮಃ ಪ್ರಾಪ್ತಿಯಲ್ಲ. ಅದನ್ನು ಅನುಸಂಧಾನಕ್ಕೆ ತಂದುಕೊಂಡರೆ ಮಾತ್ರ ತಮಸ್ಸು. ನಿಂದಿಸುವದಕ್ಕಾಗಿ ಅವಶ್ಯವಾಗಿ ಮಿಥ್ಯಾಜ್ಞಾನವನ್ನು ಸಂಪಾದಿಸಬೇಕು. ಅದನ್ನು ತಿರಸ್ಕರಿಸದೇ ವಿದ್ಯೆಯಲ್ಲಿ ಮಾತ್ರ ಆಸಕ್ತನಾದ ವ್ಯಕ್ತಿಗೆ ಇನ್ನಷ್ಟು ಮತ್ತಷ್ಟು ಘೋರವಾದ ಲೋಕಗಳಾಗುತ್ತವೆ. ಇದು ಸತ್ಯ.

ಅವಿದ್ಯೆಯ ಗೋಜಿಗೆ ಹೋಗದೇ ವಿದ್ಯೆಯನ್ನು ಮಾತ್ರ ಸಂಪಾದಿಸಿದ ಪುರುಷನಿಗೆ ತಮಸ್ಸಾಗುತ್ತದೆ. ಅದರಲ್ಲೂ ಅವಿದ್ಯೋಪಾಸಕನಿಗಿಂತಲೂ ಮಿಗಿಲಾದ ತಮಸ್ಸಾಗುತ್ತದೆ ಎಂದು ಈ ಮಂತ್ರ ತಿಳಿಸುತ್ತದೆ. ಇದು ಏಕೆ ಎಂದು ತಿಳಿದು ಬರುವದಿಲ್ಲ. ಇದನ್ನು ವಾದಿರಾಜರು ರಮ್ಯವಾಗಿ ವಿವರಿಸುತ್ತಾರೆ.

ಅವಿದ್ಯೆಯ ಉಪಾಸನೆ ಮಾಡುವವಗೆ ಸದ್ವಿದ್ಯೆ ಯಾವುದೆಂದು ಗೊತ್ತು ಇರುವದಿಲ್ಲ. ಹೀಗಾಗಿ ಅವಿದ್ಯೆಯ ನಿಂದೆ ಮಾಡಬೇಕೆಂಬುದನ್ನು ತಿಳಿಯಲಾರ. ಆದ್ದರಿಂದ ಭಗವಂತನನ್ನು ಜೀವರೆಂದು ತಿಳಿದು ಬ್ರಹ್ಮ ನಿರ್ಗುಣ, ನಿರಾಕಾರ ಎಂಬುದಾಗಿ ಉಪಾಸನೆ ಮಾಡುತ್ತಾನೆ. ಅವನಿಗೆ ತಮಸ್ಸು ತಪ್ಪಿದ್ದಲ್ಲ.

ಆದರೆ ಸದ್ವಿದ್ಯೆಯನ್ನು ತಿಳಿದು,ಅವಿದ್ಯೆಯ ಪರಿಹಾರವನ್ನು ಮಾಡಿಕೊಳ್ಳಬೇಕೆಂಬುದನ್ನೂ ಅರಿತು, ವಿಪರೀತಜ್ಞಾನವನ್ನು ನಿಂದಿಸದೆ ಭಗವಂತನ ದ್ವೇಷಿಗಳನ್ನು ಉಪೇಕ್ಷೆ ಮಾಡುವವನಿಗೆ ಜ್ಞಾನಪೂರ್ವಕ ಬ್ರಹ್ಮಹತ್ಯೆ ಮಾಡಿದವಗೆ ದುಃಖ ಹೆಚ್ಚಾಗುವಂತೆ, ಹೆಚ್ಚಿನ ತಮಸ್ಸು ಆಗುತ್ತದೆ. ಇದಿಷ್ಟು ವಾದಿರಾಜರ ನಿರೂಪಣೆ.

ಛಲಾರಿ ಆಚಾರ್ಯರು ಇದಕ್ಕೆ ಪೋಷಕವಾಗುವಂತೆ ದೃಷ್ಟಾಂತದ ವಿವರಣೆಯನ್ನು ಮಾಡುತ್ತಾರೆ.

ಬ್ರಾಹ್ಮಣ ಎಂದು ಗೊತ್ತಾಗದಿರುವಾಗ ಬ್ರಹ್ಮಹತ್ಯೆಯನ್ನು ಮಾಡಿದರೆ ಆರು ವರ್ಷ ಪ್ರಾಯಶ್ಚಿತ್ತವನ್ನು ಸ್ಮೃತಿಗಳಲ್ಲಿ ಪ್ರತಿಪಾದಿಸಿದ್ದಾರೆ. ಬ್ರಾಹ್ಮಣ ಎಂದು ಜ್ಞಾನವಾದಮೇಲೆ ಬ್ರಹ್ಮಹತ್ಯಾ ನಿಷಿದ್ಧವೆಂಬ ಅರಿವು ಇದ್ದಮೇಲೂ ಬ್ರಹ್ಮಹತ್ಯಾ ಮಾಡಿದವಗೆ ಹನ್ನೆರಡು ವರ್ಷ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂದು 'ಬ್ರಹ್ಮಹಾ ದ್ವಾದಶಾಬ್ದಂ ವ್ರತಂ ಚರೇತ್' ಎಂಬ ಸ್ಮೃತಿ ತಿಳಿಸುತ್ತದೆ.

ಹಾಗೆಯೇ ಅವಿದ್ಯೆಯಲ್ಲಿ ಆಸಕ್ತನಾದವನಿಗೆ ಅವಿದ್ಯೆ ಇದು ನಿಂದನೀಯ ಎಂಬ ಅರಿವು ಇರುವದಿಲ್ಲ. ಹೀಗಾಗಿ ಅವನಿಗೆ ತಮಃಪ್ರಾಪ್ತಿಮಾತ್ರ ಆಗುತ್ತದೆ. ಸದ್ವಿದ್ಯೆಯನ್ನು ಪಡೆದವಗೆ ಅವಿದ್ಯೆ ನಿಂದನೀಯ ಎಂಬ ತತ್ತ್ವ ತಿಳಿದಿರುತ್ತದೆ. ಆದರೂ ಅದನ್ನು ಪರಿಹರಿಸಿಕೊಳ್ಳ-ದಿದ್ದರೆ ಹೆಚ್ಚಿನ ತಮಸ್ಸಾಗುತ್ತದೆ. ಆದ್ದರಿಂದ ಅವಿದ್ಯೆಯ ಪರಿಹಾರ ಎಲ್ಲರಿಗೂ ಅನಿವಾರ್ಯವಾಗಿದೆ. ಕಂಚೀ ರಘುನಾಥಾಚಾರ್ಯರ ವ್ಯಾಖ್ಯಾನದಲ್ಲಿ ಇನ್ನೂ ಹೆಚ್ಚಿನ ವಿವರವಿದೆ.

ಸಾಧಕನಾದವನು ತತ್ತ್ವಜ್ಞಾನವನ್ನು ಪಡೆಯಬೇಕು. ಅದರಲ್ಲಿ ಆದರವಿರಬೇಕು. ಮಿಥ್ಯಾಜ್ಞಾನವನ್ನೂ ಪಡೆದಿರಬೇಕು. ಅದನ್ನು ನಿರಾಕರಿಸುತ್ತಲಿರಬೇಕು. ಇದರಿಂದ ಅನರ್ಥಗಳು ದೂರವಾಗುತ್ತವೆ. ಮಾತ್ರವಲ್ಲ, ಮೋಕ್ಷದ ಪ್ರಾಪ್ತಿ ಇವೆರಡರಿಂದ ಪರಿಪೂರ್ಣವಾಗುತ್ತದೆ. ಇದನ್ನು ಹೀಗೆ ತಿಳಿಯಬೇಕು. ಮೋಕ್ಷದಲ್ಲಿ ಎರಡು ಅಂಶಗಳು ಇವೆ. ಒಂದು ದುಃಖಾದಿಗಳನ್ನು ದಾಟುವದು. ಸುಖಜ್ಞಾನಾದಿರೂಪವಾದ ಅಮೃತತ್ವವನ್ನು ಪಡೆಯುವದು ಮತ್ತೊಂದು. ದುಃಖಾದಿಗಳ ತರಣಕ್ಕೆ ತರಣಿಯಾದದ್ದು ಅವಿದ್ಯಾನಿಂದನೆ. ಯಥಾರ್ಥಜ್ಞಾನದ ಸಂಪ್ರಾಪ್ತಿಯಿಂದ ಸ್ವರೂಪಸುಖದ ಅಭಿವ್ಯಕ್ತಿಯಾಗುತ್ತದೆ. ಆದಕಾರಣ ಸಾಧಕರೆಲ್ಲರಿಗೂ ಈ ಅವಿದ್ಯಾನಿಂದನೆ, ವಿದ್ಯೆಯ ಉಪಾಸನೆ ಅತ್ಯಂತ ಆವಶ್ಯಕವೆನಿಸಿವೆ.

ಅಧ್ಯಯನದ ಅಧಿಕಾರವಿಲ್ಲದಿದ್ದವರೂ ಸಹ ತಮ್ಮ ತಮ್ಮ ಅಧಿಕಾರಕ್ಕೆ ಅನುಗುಣವಾಗಿ ಜ್ಞಾನವನ್ನು ಸಂಪಾದಿಸುವಂತೆ ಅನ್ಯಥಾಜ್ಞಾನದ ಪರಿಹಾರವನ್ನೂ ಮಾಡಿಕೊಳ್ಳಲೇಬೇಕು. ಸ್ವಲ್ಪವಾಗಿದ್ದರೂ ಸರಿ. ಸಂಸಾರದ ತರಣಕ್ಕೆ, ಇದುವೆ ತರಣಿಯಾಗುತ್ತದೆಂದು ವಾಮನಪಂಡಿತರ ಹಾರ್ದ.

**ಅಂಧಂತಮಃ ಪ್ರವಿಶಂತಿ ಯೇಽಸಂಭೂತಿಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ಸಂಭೂತ್ಯಾಂ ರತಾಃ ॥ 12 ॥**

**ಅನ್ಯದೇವಾಹುಸ್ಸಂಭವಾದನ್ಯದಾಹುರಸಂಭವಾತ್ ।**
**ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥ 13 ॥**

**ಸಂಭೂತಿಂ ಚ ವಿನಾಶಂ ಚ ಯಸ್ತದ್ವೇದೋಭಯಂ ಸಹ ।**
**ವಿನಾಶೇನ ಮೃತ್ಯುಂ ತೀರ್ತ್ವಾ ಸಂಭೂತ್ಯಾಮೃತಮಶ್ನುತೇ ॥ 14 ॥**

ತತ್ತ್ವಜ್ಞಾನ ಮಿಥ್ಯಾಜ್ಞಾನಗಳು ಅನೇಕವಿಧ. ಅವುಗಳಲ್ಲಿ ಒಂದನ್ನು ಮಾತ್ರ ಈ ಮಂತ್ರ ತಿಳಿಸುತ್ತದೆ. ಭಗವಂತ ಸೃಷ್ಟಿಯನ್ನು ಮಾಡುತ್ತಾನೆ. ಎಂಬುದು ತತ್ತ್ವಜ್ಞಾನ. ಸೃಷ್ಟಿಯನ್ನು ಮಾತ್ರ ಮಾಡುತ್ತಾನೆ ಸಂಹಾರವನ್ನು ಮಾಡುವದಿಲ್ಲ ಎಂಬುದು ಮಿಥ್ಯಾಜ್ಞಾನ. ಸೃಷ್ಟಿಯನ್ನೂ ಸಂಹಾರವನ್ನೂ ಭಗವಂತನೇ ಮಾಡುತ್ತಾನೆ. ಇಷ್ಟೇ ಅಲ್ಲ, ಭಗವಂತ ಸೃಷ್ಟ್ಯಾದ್ಯಷ್ಟಕರ್ತಾ.

ಇಂತಹ ಪರಮಾತ್ಮ ಸೃಷ್ಟಿಕರ್ತಾ ಅಲ್ಲ ಎಂದು ಹಳಿದರೆ ತಮಸ್ಸಾಗುತ್ತದೆ. ಹಾಗೆಯೇ ಪರಮಾತ್ಮ ಸೃಷ್ಟಿಯನ್ನು ಮಾತ್ರ ಮಾಡುತ್ತಾನೆ ಸಂಹಾರಕರ್ತಾ ಅಲ್ಲ ಎಂದು ಸರ್ವಥಾ ಭಾವಿಸಬಾರದು. ಅಂಥವರಿಗೆ ಇನ್ನೂ ಹೆಚ್ಚಿನ ಅನರ್ಥಲೋಕಗಳಾಗುತ್ತವೆ .

ಸೃಷ್ಟಿಕರ್ತೃತ್ವ, ಸಂಹಾರಕರ್ತೃತ್ವ ಭಗವಂತನಲ್ಲಿಯೇ ಇದೆ ಎಂದು ತಿಳಿಯಬೇಕು. ಪರಮಾತ್ಮ ಸಂಹಾರಕರ್ತಾ ಎಂದು ತಿಳಿದವರಿಗೆ ಉಳಿದ ದುಃಖಗಳೆಲ್ಲ ಅಳಿದು ಹೋಗುತ್ತವೆ. ಮೃತ್ಯುವಿಗೆ ಕಾರಣವಾದ ದೇಹಾದಿಬಂಧದ ನಾಶವಾಗುತ್ತದೆ. ಸೃಷ್ಟಿಕರ್ತಾ ಎಂಬ ಅನುಸಂಧಾನದಿಂದ ಸ್ವರೂಪಭೂತವಾದ ಸುಖಜ್ಞಾನಾದಿಗಳ ಅಭಿವ್ಯಕ್ತಿಯಾಗುತ್ತದೆ. 'ತಂ ಯಥಾ ಯಥಾ ಉಪಾಸತೇ ತದೇವ ಭವತಿ' ಎಂಬ ಶ್ರುತಿ ಇದನ್ನು ಪ್ರತಿಪಾದಿಸುತ್ತದೆ.

ಭಗವಂತನಲ್ಲಿ ಯಾವ ದೋಷಗಳೂ ಇಲ್ಲ, ಎಲ್ಲೆ ಇಲ್ಲದ ಒಳ್ಳೆಯ ಗುಣಗಳಿಗೆ ನೆಲೆಯಾದವನು. ಇಂಥವನಲ್ಲಿ ಅಷ್ಟ ಗುಣಗಳಿವೆ. ಅಷ್ಟೇ ಗುಣಗಳಿವೆ ಎಂದು ತಿಳಿಯಕೂಡದು. ಹಾಗೆ ತಿಳಿದವನು ಅನಿಷ್ಟವಾದ ಕಷ್ಟಗಳಿಂದ ಪಾರಾಗಲಾರ.

ಮುಕ್ತರಾದವರು ಪರಮಾತ್ಮನಿಗೆ ಸಮಾನರೆಂದೆಣಿಸಬಾರದು. ಜೀವರು ಪರಬ್ರಹ್ಮನಿಂದ ಅಭಿನ್ನರಾಗಿದ್ದಾರೆಂಬುದನ್ನಂತೂ ಸರ್ವಥಾ ತಲೆಯಲ್ಲಿ ತಂದುಕೊಳ್ಳಬಾರದು. ಅಂಥವನು ಪುನರುತ್ಥಾನವಿಲ್ಲದ ದುಃಖದ ಲೋಕಗಳನ್ನು ಪಡೆಯುತ್ತಾನೆ.

